# ಶಿವ ಛತ್ರಪತಿ

ಶ್ರೀನಿವಾಸ

ಸತ್ಯಶೋಧನ ಪುಸ್ತಕ ಭಂಡಾರ
ಬೆಂಗಳೂರು ನಗರ.

ಬೆಲೆ ೧೨ ಆಣೆ

# ಮುನ್ನುಡಿ

ಈ ನಾಟಕವನ್ನು ಬರೆಯುವ ಕೆಲಸ ಈಗ ಹತ್ತು ವರುಷಗಳ ಹಿಂದೆ ಆರಂಭವಾಗಿ ಏಳು ವರುಷಗಳ ಹಿಂದೆ ಸ್ವಲ್ಪ ಮುಂದುವರಿದು ಅಷ್ಟಕ್ಕೆ ನಿಂತಿದ್ದು ಈಗ ಕೆಲವು ತಿಂಗಳ ಹಿಂದೆ ಪೂರ್ತಿಯಾಯಿತು. ಇದು ಸಿದ್ಧವಾಗುವ ವೇಳೆಗೆ ಬೆಂಗಳೂರಿನ ವಿಶ್ವವಿದ್ಯಾನಿಲಯದ ಸಂಘದವರು ಅಭಿನಯಕ್ಕಾಗಿ ಒಂದು ನಾಟಕವನ್ನು ಅಪೇಕ್ಷಿಸುತ್ತಿದ್ದು ಇದನ್ನು ಕೇಳಿ ತೆಗೆದುಕೊಂಡರು. ಹಿಂದಿನ ವರ್ಷ 'ಮಂಜುಳಾ' ನಾಟಕವನ್ನು ಆಡಿ ತೋರಿಸಿ ಉಪಕಾರಮಾಡಿದ್ದ ಉತ್ಸಾಹಶೀಲರೂ ಕಲಾಪ್ರೇಮಿಗಳೂ ಆದ ಈ ಮಿತ್ರರ ನೆರವಿನಿಂದ, ಈ ನಾಟಕವೂ ಬರೆದುಮುಗಿದೊಡನೆ ರಂಗದಲ್ಲಿ ಕಂಡಿತು. ಇದಕ್ಕಾಗಿ ಸಂಘದವರಿಗೆ ಅನೇಕ ವಂದನೆಗಳು. ಪಾತ್ರಗಳನ್ನು ವಹಿಸಿದ ಮಿತ್ರರ ಹೆಸರನ್ನು ಮುಂದೆ ತೋರಿಸಿದೆ. ಇವರ ಅಭಿನಯದ ವಿಷಯ ನಾನು ಹೆಚ್ಚು ಹೇಳುವುದಿಲ್ಲ; ಚೆನ್ನಾಗಿತ್ತೆಂದು ನಾಟಕವನ್ನು ನೋಡಿದ ಹಲವರು ಕಲಾಭಿಜ್ಞರು ಅಭಿಪ್ರಾಯಪಟ್ಟರು; ನನ್ನದೂ ಇದೇ ಅಭಿಪ್ರಾಯ. ಮುಖ್ಯ ಇದರಲ್ಲೆಲ್ಲ ಶ್ರೀಮಾನ್ ಪಿ. ಶ್ರೀನಿವಾಸರಾಯರು ತೆಗೆದುಕೊಂಡ ಶ್ರದ್ಧೆ ಶ್ರಮ ಎಷ್ಟೆಂದು ಹೇಳುವುದು ಸಾಧ್ಯವಲ್ಲ. ಹೊಸ ರೀತಿಯ ನಾಟಕಗಳು ರಂಗಕ್ಕೆ ಬರುವುದಕ್ಕೆ ಇವರೂ ಇವರ ಜೊತೆಯವರೂ ಹೀಗೆಯೇ ಸದಾ ಸಹಾಯ ಮಾಡಲೆಂದು ನಾನು ಆಶಿಸುತ್ತೇನೆ. ಪ್ರದರ್ಶನವನ್ನು ನೋಡಿದ ಮಿತ್ರರಲ್ಲಿ ಕೆಲವರು ನಾಟಕವೂ ಚೆನ್ನಾಗಿದೆ ಎಂದು ಹೇಳಿದಾರೆ; ಇನ್ನು ಕೆಲವರು ಶಿವಾಜಿಗೆ ತೇಜಸ್ಸು ಸಾಲದೆಂದೂ, ನಾಟಕದಲ್ಲಿ ಇತಿಹಾಸದಲ್ಲಿದ್ದ ರಭಸವಿಲ್ಲವೆಂದೂ, ಕೆಲವು ಸಂಗತಿ ಅಸಂಭಾವ್ಯವೆಂದೂ ಅಭಿಪ್ರಾಯಪಟ್ಟಿದಾರೆ. ನನ್ನ ಗ್ರಂಥಗಳ ವಿಷಯದಲ್ಲಿ ನನಗಿರುವ ಪ್ರತ್ಯಾಶೆ ಏನೆಂದು ನಾನು ಬಹು ದಿನಗಳ ಹಿಂದೆಯೇ ಅರಿಕೆ ಮಾಡಿದೇನೆ. ನನಗೆ ನಿಲುಕುವಷ್ಟನ್ನು ನಾನು ಇಲ್ಲಿ ತೆಗೆದಿಟ್ಟಿದೇನೆ.

ಇತರರೂ ಅವರವರಿಗೆ ನಿಲುಕಿದಷ್ಟನ್ನು ಸಾಹಿತ್ಯಕ್ಕೆ ತರಲಿ. ನಿರಂತರ ಹೀಗೆ ಎಲ್ಲರೂ ಯತ್ನಮಾಡಿದರೆ ನಮ್ಮ ಸಾಹಿತ್ಯ ಚೆನ್ನಾಗುವುದು. ನನ್ನಿಂದ ಆಗುತ್ತಿರುವ ನಾಲ್ಕು ಕೆಲಸದಲ್ಲಿ ಒಂದೆರಡಾದರೂ ಚೆನ್ನಾದರೆ ನಾನು ಧನ್ಯನು. ಚೆನ್ನವಾಗದ್ದು ಕಂಡಾಗ ನಮ್ಮ ಜನರು ನನ್ನ ಉದ್ದೇಶವನ್ನು ನೆನೆದು ಮನ್ನಿಸಬೇಕೆಂದು ಪ್ರಾರ್ಥಿಸುತ್ತೇನೆ. ಅವರು ನನ್ನ ವಿಷಯದಲ್ಲಿ ಈ ತಾಳ್ಮೆಯನ್ನು ಇದುವರೆಗೆ ತೋರಿದಾರೆ; ಇನ್ನು ಮುಂದೆಯೂ ತೋರುವರೆಂದು ನಾನು ನಂಬಿದೇನೆ.

ಬೆಂಗಳೂರು, ಪ್ರಜೋತ್ಪತ್ತಿ ಸಂ॥
ಫಾಲ್ಗುಣ ಬಹುಳ ಪಂಚಮಿ.

ಶ್ರೀನಿವಾಸ.

---

# ಶ್ರೀನಿವಾಸ ರಚಿತ

---

| | |
|---|---|
| ಕೆಲವು ಸಣ್ಣ ಕತೆಗಳು | ಸುಬ್ಬಣ್ಣ (ಕತೆ) |
| ಬಿನ್ನಹ (ಗೀತೆಗಳು) | ತಾಳೀಕೋಟೆ (ಐತಿಹಾಸಿಕ ದೃಶ್ಯ) |
| ಶಾಂತಾ (ಸಣ್ಣ ದೃಶ್ಯ) | ವಿಮರ್ಶೆ ೨ (ಲೇಖನಗಳು) |
| ಸಾವಿತ್ರಿ ( ,, ) | ನಾಲ್ಕು ಸಣ್ಣ ಕತೆಗಳು |
| ಸಣ್ಣ ಕತೆಗಳು | ಕನ್ನಡದ ಸೇವೆ (ಭಾಷಣ) |
| ಸಾಹಿತ್ಯ (ಉಪನ್ಯಾಸ) | ಮಂಜುಳಾ (ಸಾಮಾಜಿಕ ದೃಶ್ಯ) |
| ಅರುಣ (ಪದ್ಯಗಳು) | ತಾವರೆ (ಪದ್ಯಗಳು) |
| ವಿಮರ್ಶೆ ೧ (ಲೇಖನಗಳು) | ಕರ್ಣಾಟಕದ ಜನತೆಯ ಸಂಸ್ಕೃತಿ |
| ಉಷಾ (ಸಣ್ಣ ದೃಶ್ಯ) | ಚೆಲುವು (ಪದ್ಯಗಳು) |

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಕರ್ಣಾಟಕ ಸಾಹಿತ್ಯ ಪ್ರಕಟನ ಮಂದಿರ, ಬೆಂಗಳೂರು

ಎಂ. ಎಸ್. ರಾವ್ ಕಂಪೆನಿ, ದೊಡ್ಡಪೇಟೆ, ಬೆಂಗಳೂರು

ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು

ದಿ ಪ್ರೋಗ್ರೆಸ್ ಬುಕ್ ಸ್ಟಾಲ್, ಮೈಸೂರು

ಶ್ರೀ ಶಂಕರ ಕರ್ಣಾಟಕ ಪುಸ್ತಕ ಭಾಂಡಾರ, ಧಾರವಾಡ

# ಪಾತ್ರಗಳು

ಈ ನಾಟಕ ೧೬–೧೨–೩೧ರಲ್ಲಿ ಮೊದಲನೆಯಸಲ ಅಭಿನಯಿಸಲ್ಪಟ್ಟಾಗ ಪಾತ್ರಗಳನ್ನು ವಹಿಸಿದವರ ಹೆಸರುಗಳನ್ನು ಬಲಗಡೆ ತೋರಿಸಿದೆ.

| | | |
|---|---|---|
| ರಘೋಜಿ | ಶ್ರೀ | ಹೆಚ್. ಲಕ್ಷ್ಮೀನಾರಾಯಣ |
| ಜೀವಾಜಿ | ,, | ಬಿ. ಎ. ರಾಮಾಶಾಸ್ತ್ರಿ |
| ಶಿವಾಜಿ | ,, | ಪಿ. ಶ್ರೀನಿವಾಸರಾವ್, ಎಂ.ಎಸ್ಸಿ. |
| ಆಬಾಜಿ | ,, | ಹೆಚ್. ಎಸ್. ವೆಂಕಟರಾಮಯ್ಯ, ಬಿ.ಎಸ್ಸಿ. |
| ಪಿಂಗಳೆ | ,, | ಎಂ. ನರಸಿಂಹಮೂರ್ತಿ, ಬಿ.ಎ. |
| ತಾನಾಜಿ | ,, | ಬಿ. ಸೇತುರಾಮ ಅಯ್ಯಂಗಾರ್ |
| ಮೌಲಾನಾ ಅಹಮದ್ | ,, | ಎಸ್. ಕೆ. ಅಬ್ದುಲ್ ಅಜಿಜ್ |
| ಕಾಸೀಂ ಖಾನ್ | ,, | ಕೆ. ಎ. ಖಯ್ಯಾಮ್ |
| ಸುಂದರಿ | ,, | ಎಸ್. ಗೋವಿಂದರಾವ್ |
| ಜೀಜಾಬಾಯಿ | ,, | ಎಸ್. ವೆಂಕಟಸುಬ್ಬಯ್ಯ |
| ರಾಮದಾಸ | ,, | ಎ. ಕೆ. ಶ್ರೀಕಂಠನ್ |
| ಸಯಿರಾಬಾಯಿ | ,, | ಟಿ. ದ್ವಾರಕನಾಥ್ |
| ಔರಂಗಜೇಬ್ | ,, | ಎಸ್. ಮಹಮ್ಮದ್ ಹಯಾತ್ |
| ಜಯಸಿಂಹ | ,, | ಎಲ್. ರಾಜಾರಾವ್ |
| ರೋಷನಾರ | ,, | ಟಿ. ದ್ವಾರಕನಾಥ್ |
| ದರ್ಬಾರ್ ಭಕ್ಷಿ | ,, | ಎಲ್. ಸೀಬಯ್ಯ, ಬಿ.ಎಸ್ಸಿ. |
| ರಾಮಸಿಂಹ | ,, | ಬಿ. ವಿ. ರಾಮರಾವ್ |
| ರಘುನಾಥ | ,, | ಎನ್. ಎ. ನಾರಾಯಣರಾವ್, ಬಿ.ಎಸ್ಸಿ. |

ಸೇವಕರು, ಬ್ರಾಹ್ಮಣರು, ಇತ್ಯಾದಿ — ಶ್ರೀಮಾನ್
- ಜಿ. ಶ್ರೀನಿವಾಸರಾವ್
- ಬಿ. ಎ. ರಾಮಾಶಾಸ್ತ್ರಿ
- ಕೆ. ಗೋಪಿನಾಥರಾವ್
- ಬಿ. ಆರ್. ರಾಘವೇಂದ್ರರಾವ್, ಬಿ.ಎಸ್ಸಿ.
- ವಿ. ಕೃಷ್ಣಮೂರ್ತಿ

# ಶಿವಛತ್ರಪತಿ

## ಅಂಕ ೧

### ಸ್ಥಾನ ೧

ರಾಯಘಡದಲ್ಲಿ ಶಿವಾಜಿಯ ಅರಮನೆಯ ಆಸ್ಥಾನಮಂಟಪ. ಕೆಲವರು ಸಭಿಕರೂ ಕೆಲವರು ಸೇವಕರೂ ಇರುವರು.

**ರಘೋಜಿ**— ಕಲ್ಯಾಣ ಕೈಸೇರಿತು.

**ಜೀವಾಜಿ**— ನಮ್ಮ ರಾಜರು ಹಿಡಿದ ಕೆಲಸ ಆಗದೆ ಇರುತ್ತದೆಯೆ.

**ರಘೋಜಿ**— ಅಂತೂ ನಾಲ್ಕು ವರ್ಷದ ಕೆಲಸ ಈಗ ಮುಗಿಯಿತು. ಆಬಾಜಿ ಸೋಂದೇವರ ಪ್ರಭುಭಕ್ತಿ ಸಾರ್ಥಕವಾಯಿತು. ಆ ನವಾಬನ ಹೆಸರೇನು? ಹಾಳಾದದ್ದು ನನಗೆ ಈ ಮುಸಲ್ಮಾನೀ ಹೆಸರು ಜ್ಞಾಪಕ ಇರುವುದಿಲ್ಲ.

**ಜೀವಾಜಿ**— ಮುಲಾನಾ ಅಹಮದ್.

**ರಘೋಜಿ**— ಅವನೂ ಚೆನ್ನಾಗಿ ಕಾದಿದ.

**ಜೀವಾಜಿ**— ಹೌದು. ಗುಣಕ್ಕೆ ಮತ್ಸರವಿಲ್ಲ.

**ರಘೋಜಿ**— ಸೆರೆ ಹಿಡಿದುಕೊಂಡು ಬಂದಿದಾರಂತೆ.

**ಜೀವಾಜಿ**— ಬಾಗಿಲಲ್ಲಿ ಹಿಡಿದು ನಿಲ್ಲಿಸಿಕೊಂಡಿದ್ದರು. ನೋಡಲಿಲ್ಲವೆ?

**ರಘೋಜಿ**— ಯಾರೋ ಬುರುಕಿ ಹಾಕಿಕೊಂಡಿದ್ದವರನ್ನು ನೋಡಿದೆ. ಏಕೆ ನಗುತ್ತೀರಿ. ಅದು ಯಾರು?

**ಜೀವಾಜಿ**— (ಇನ್ನೊಬ್ಬನನ್ನು ಕರೆದು) ದಾದಾಜಿ, ಆ ಬುರುಕಿ ಹಾಕಿಕೊಂಡಿದ್ದವರು ಯಾರು ಎಂದು ರಘೋಜಿಯವರಿಗೆ ತಿಳಿಯಬೇಕಂತೆ.

**ದಾದಾಜಿ**— ಆ ಮಾತು ಆಮೇಲೆ. ರಾಜರು ದಯಮಾಡಿಸಿದರು.

ಶಿವಾಜಿಯು ತಾನಾಜಿ ಪಿಂಗಳೆ ಆಬಾಜಿ ಇವರೊಂದಿಗೆ ಪ್ರವೇಶಿಸುವನು.

ಎಲ್ಲರೂ— ಜಯ ಶಿವಾಜಿ ಮಹಾರಾಜ!

ಶಿವಾಜಿ— (ತಲೆಬಾಗಿ ಮುಂದಕ್ಕೆ ಹೋಗಿ ಪೀಠದ ಮೇಲೆ ಕುಳಿತು ಎಲ್ಲರನ್ನೂ ಕುಳಿತುಕೊಳ್ಳಲು ಸನ್ನೆಮಾಡಿ ಆಬಾಜಿ ಸೋಂದೇವನನ್ನು ಕುರಿತು) ಬನ್ನಿ, ಆಬಾಜಿ. ನಿಮ್ಮ ಜಯದ ವಿಷಯವನ್ನು ಎಲ್ಲರೂ ಕೇಳಲಿ. ವಿವರಿಸಿ ಹೇಳಿ.

ಆಬಾಜಿ— ಮಹಾಸ್ವಾಮಿಯವರ ಎದುರಿಗೆ ಹೇಳಿಕೊಳ್ಳಬೇಕಾದಷ್ಟು ದೊಡ್ಡ ವಿಷಯವೇನೂ ಅಲ್ಲ ಅದು. ಕಾಸೀಂ ಖಾನರು ಹೇಳಿದ ಸಮಯ ನೋಡಿ ನಮ್ಮವರು ಕೋಟೆಯೊಳಕ್ಕೆ ನುಗ್ಗಿದರು. ಶತ್ರುಗಳು ಎದುರು ನಿಲ್ಲುವ ಸ್ಥಿತಿಯಲ್ಲಿರಲಿಲ್ಲ. ಅವರ ಜನ ಒಂದು ಐವತ್ತು ನಮ್ಮ ಜನ ಒಂದು ಇಪ್ಪತ್ತು ಬೀಳುವ ಹೊತ್ತಿಗೆ ಅವರು ಓಡಿದರು. ಆಗ ಮುಲಾನಾ 'ಸುಮ್ಮನೆ ಪ್ರಾಣಹತ್ಯ ಬೇಡ. ಕೋಟೆಯನ್ನು ತೆಗೆದುಕೊಳ್ಳಿ' ಎಂದರು. ಅಂಬಾ ಭವಾನಿಯ ಕೃಪೆಯಿಂದ ಕೆಲಸ ಸುಲಭದಲ್ಲಿಯೇ ಕೈಗೂಡಿತು.

ಶಿವಾಜಿ— ಈ ಸಹಾಯವನ್ನು ಮಾಡಿದ್ದಕ್ಕಾಗಿ ನಾವು ಕಾಸೀಂ ಖಾನರಿಗೆ ಸರ್ವ ವಿಧದಲ್ಲಿಯೂ ಬಾಧ್ಯರು. ಆತನೆಲ್ಲಿ?

ಜೀವಾಜಿ— ಹೊರಗಡೆ ಮಾವನೊಂದಿಗೆ ಮಾತನಾಡುತ್ತಿದ್ದಾರೆ.

ಶಿವಾಜಿ— ಮಾವನನ್ನು ನಮ್ಮ ಕೈಗೆ ಹಿಡಿದುಕೊಟ್ಟು ಅವನೊಂದಿಗೆ ಮಾತೇನು? ಖೈದಿಯನ್ನು ಬರಮಾಡಿ (ಜೀವಾಜಿ ಹೋಗುವನು) ಆಬಾಜಿ, ಮುಲಾನಾ ಬಹಳ ಶೂರರಲ್ಲವೇ?

ಆಬಾಜಿ— ಮಹಾಸ್ವಾಮಿ, ಸಿಂಹದ ಹಾಗೆ ಕಾದಿದರು.

ಶಿವಾಜಿ— ಶಹಬಾಸ್! (ಕಾಸೀಂ ಖಾನ್ ಮುಲಾನಾ ಬುರುಕಿ ಹಾಕಿಕೊಂಡಿರುವ ಖೈದಿ ಕೆಲವರು ಸೇವಕರು ಬರುವರು.) ಕಾಸೀಂ ಖಾನ್ ಕುಳಿತುಕೊಳ್ಳಿ. ನಿಮ್ಮ ಸಹಾಯವನ್ನು ನಾವು ಮರೆಯಲಾಗದು. (ಕಾಸೀಂ ಖಾನ್ ಬಂದು ಕುಳಿತುಕೊಳ್ಳುವನು) ಮುಲಾನಾ ಕೊನೆಗೂ ಸೋತಿರಿ.

ಮುಲಾನಾ—ಅಯ್ಯಾ, ಯುದ್ಧದಲ್ಲಿ ಒಬ್ಬರಲ್ಲ ಒಬ್ಬರು ಸೋಲಬೇಕು. ನಾಲ್ಕುಸಲ ನೀವು ಸೋತಿರಿ. ಈಗ ನಾವು ಸೋತೆವು.

**ಶಿವಾಜಿ**— ನಿಜ. ಆದರೆ ನೀವು ನಮ್ಮ ಸ್ನೇಹಿತರಾಗಿರಬಹುದಾಗಿತ್ತು. ಈಗ ಅದು ಅಸಾಧ್ಯವಾಯಿತು.

**ಮುಲಾನಾ**—ಅಯ್ಯೋ, ನನಗೆ ಯಾವ ದರೋಡೆಗಾರನೊಂದಿಗೂ ಸ್ನೇಹ ಬೇಕಾಗಿಲ್ಲ.

**ತಾನಾಜಿ**— ಖೂಳ (ಎಂದು ಏಳುವನು).

**ಶಿವಾಜಿ**— (ಗದರಿಸಿ) ತಾನಾಜಿ! (ಮುಲಾನಾಗೆ) ಮುಲಾನಾ ಸಾಹೇಬ್, ನಮ್ಮನ್ನು ದರೋಡೆಗಾರರೆನ್ನುವಿರೋ?

**ಮುಲಾನಾ**—ಅಯ್ಯೋ, ನೀನು ಇನ್ನೇನೂ ಆಗಲಾರೆ. ಬಿಜಾಪುರದ ಸುಲ್ತಾನನ ಅನ್ನದಿಂದ ಬೆಳೆದು ಅವನ ಮನೆಗೆ ಎರಡನ್ನು ಬಗೆದೆ. ಅವನ ರಾಜ್ಯದಲ್ಲಿ ದೊಡ್ಡ ದರೋಡೆಯ ಕಳ್ಳನಾಗಿರುವೆ. ಈವರೆಗೆ ಅದನ್ನು ಇದನ್ನು ಬಾಯಿಗೆ ಹಾಕಿಕೊಂಡೆ. ಈಗ ಕಲ್ಯಾಣವನ್ನೂ ನುಂಗಿದೆ.

**ಶಿವಾಜಿ**— ಮುಲಾನಾ, ನನ್ನ ಜನವೇ ನನ್ನನ್ನು ದರೋಡೆಗಾರನೆಂದು ಹೇಳುತ್ತಿದೆ. ನೀವು ಹಾಗೆ ಎಂದುಕೊಳ್ಳುವುದು ಏನು ಹೆಚ್ಚು? ಆದರೆ ನನ್ನ ವಿಷಯದಲ್ಲಿ ತಪ್ಪು ಆಡುವವರಿಗೆಲ್ಲ ನಾನು ಸಮಾಧಾನ ಹೇಳುವುದು ಸಾಧ್ಯವೇ? ಅದು ಹಾಗಿರಲಿ. ನೀವು ನಿಮ್ಮ ದುರ್ಗದಲ್ಲಿದ್ದಾಗ ನನ್ನನ್ನು ಹೀಗೆ ಹೇಳಿದರೂ ತೊಂದರೆ ಇರಲಿಲ್ಲ. ಈಗ ನನ್ನ ಖೈದಿಯಾಗಿ ಹೇಳಿದರೆ ನಿಮ್ಮನ್ನು ಏನು ಮಾಡುವೆನೆಂದು ಯೋಚಿಸಬೇಡವೆ?

**ಮುಲಾನಾ**—ನೀನು ಮಾಡುವ ಯಾವ ಶಿಕ್ಷೆಗಾದರೂ ನಾನು ಸಿದ್ಧವಾಗಿಯೇ ಬಂದಿದೇನೆ. ಮರಾಟೆಯವರ ಕೈಗೆ ಸಿಕ್ಕಿದ ಖೈದಿಗಳೆಲ್ಲರೂ ಹೀಗೆಯೇ ಬರುವರು.

**ಶಿವಾಜಿ**— ಶತ್ರುಗಳು ಇಷ್ಟು ದೂಷಿಸುವುದಾದರೆ ಮರಾಟೆಯವರು ಶೂರರಾಗಿಯೇ ಇರಬೇಕು. ಆದರೆ ಮುಲಾನಾ! ಈ ಕಠಿನವಾದ ಮಾತುಗಳಿಂದ ನಿಮಗೆ ಉಪಯೋಗವಿಲ್ಲ. ಈಗಲೂ ನನ್ನ ಕಡೆಯವರಾಗಿ ಇರುವುದಾದರೆ ನಿಮಗೆ ಕಲ್ಯಾಣವನ್ನು ಮತ್ತೆ ಕೊಡುತ್ತೇನೆ.

ಮುಲಾನಾ—ಅಯ್ಯಾ, ಅದನ್ನು ಕೊಡುವುದಕ್ಕೆ ನಿನಗೆ ಅಧಿಕಾರವಿಲ್ಲ. ಅದನ್ನು ನಿನ್ನಿಂದ ತೆಗೆದುಕೊಳ್ಳುವುದಕ್ಕೆ ನನಗೆ ಅಧಿಕಾರವಿಲ್ಲ. ಕಲ್ಯಾಣವು ಬಿಜಾಪುರದ ಸುಲ್ತಾನರದು.

ಶಿವಾಜಿ— ಬಿಜಾಪುರದವರಿಂದ ನಾನು ತೆಗೆದುಕೊಂಡಿದೇನಲ್ಲ. ಅದು ಈಗ ನನ್ನದು.

ಮುಲಾನಾ—ಅದನ್ನು ನೀನು ಮೋಸದಿಂದ ಪಡೆದೆ. ಈ ದ್ರೋಹಿಯು ಅದರ ಗುಟ್ಟನ್ನು ಹೇಳದೇ ಇದ್ದರೆ ಅದು ನಿನಗೆ ಹೇಗೆ ಸಿಕ್ಕುತ್ತಿತ್ತು? ಅದು ದರೋಡೆಯ ಸ್ವತ್ತು; ಅದನ್ನು ನಾನು ನಿನ್ನಿಂದ ಮತ್ತೆ ತೆಗೆದುಕೊಳ್ಳಲಾರೆನು.

ಶಿವಾಜಿ— ನಿಮಗೆ ಶಿಕ್ಷೆಯನ್ನೇ ಮಾಡಬೇಕಾಯಿತು.

ಮುಲಾನಾ—ಆಗಬಹುದು.

ಶಿವಾಜಿ— ಮೋರೋಪಂತರೆ, ಆ ಸರಪಳಿಯನ್ನು ತನ್ನಿ. (ಪಿಂಗಳೆ ಹೋಗುವನು) ಮುಲಾನಾ, ಅವರು ತರುವ ಸರಪಳಿಯನ್ನು ಕುತ್ತಿಗೆಯಲ್ಲಿ ಹಾಕಿಕೊಂಡು ನೀವು ನಮ್ಮ ನಗರದಲ್ಲಿ ಎಲ್ಲರೂ ನೋಡುವ ಹಾಗೆ ಮೆರವಣಿಗೆ ಹೋಗಬೇಕು. ನೀವು ನಮಗೆ ಇಷ್ಟು ದಿನವೂ ಕೊಟ್ಟ ಕಷ್ಟಕ್ಕೆ ಈ ಅವಮಾನವು ಶಿಕ್ಷೆ.

ಮುಲಾನಾ—ನಿಮ್ಮ ಇಷ್ಟ.

(ಪಿಂಗಳೆ ಒಂದು ಮುಚ್ಚಿದ ಬುಟ್ಟಿಯನ್ನು ತೆಗೆದುಕೊಂಡು ಬರುವನು.)

ಶಿವಾಜಿ— ಪಂತರೆ, ಖೈದಿಯ ಕುತ್ತಿಗೆಗೆ ಆ ಸರಪಳಿಯನ್ನು ಹಾಕಿ.

ಪಿಂಗಳೆ— ಅಪ್ಪಣೆ (ಎಂದು ಬುಟ್ಟಿಯಿಂದ ಒಂದು ಹೂವಿನ ಹಾರವನ್ನು ತೆಗೆಯುವನು).

ಮುಲಾನಾ—(ಆಶ್ಚರ್ಯದಿಂದ) ಇದೇನು ಈ ಪರಿಹಾಸ್ಯ!

ಶಿವಾಜಿ— ಮುಲಾನಾ, ನಿಮ್ಮಂತಹ ವೀರರಿಗೆ ಇದೇ ತಕ್ಕ ಶಿಕ್ಷೆ. ಈ ಹಾರವನ್ನು ಧರಿಸಿ. (ಪಿಂಗಳೆ ಅವನಿಗೆ ಹಾರವನ್ನು ಹಾಕುವನು.) ಅಯ್ಯಾ! ವೀರರಾಗಿರುವುದು ಮನುಷ್ಯರಿಗೆ ಸಾಧ್ಯವಲ್ಲದೆ, ಸೋಲು ಗೆಲ್ಲು ನಮ್ಮ ಯತ್ನವಲ್ಲ. ಗೆದ್ದರೆ ಮಾತ್ರ ಮರ್ಯಾದೆ ಸೋತರೆ ಇಲ್ಲವೆಂದರೆ ವೀರನಾದದ್ದಕ್ಕೆ ಮರ್ಯಾದೆಯೆಲ್ಲಿ? ಇನ್ನು

ನೀವು ಹೋಗಬಹುದು. ಪಂತರೆ, ಇವರ ಪ್ರಯಾಣಕ್ಕೆ ಬೇಕಾದ ಸೌಕರ್ಯಗಳನ್ನು ಮಾಡಿಕೊಡಿ.

**ಪಿಂಗಳೆ—** ಅಪ್ಪಣೆ.

**ಮುಲಾನಾ—**ಅಯ್ಯಾ, ನಿಮ್ಮಲ್ಲಿ ಇಂಥ ಔದಾರ್ಯವಿದೆ ಎಂದು ನಾನು ತಿಳಿದಿರಲಿಲ್ಲ. ಇದು ನೀವು ನನಗೆ ತೋರಿಸಿರುವ ಕೃಪೆಗೆ ನಾನು ಚಿರಕಾಲವೂ....

**ಶಿವಾಜಿ—** ಮುಲಾನಾ ಸಾಹೇಬ್, ಆ ಮಾತು ಇರಲಿ, ನೀವು ಮರಾಟೆಯವರ ವಿಷಯದಲ್ಲಿ ಇರಿಸಿಕೊಂಡಿದ್ದ ಕೆಟ್ಟ ಅಭಿಪ್ರಾಯವನ್ನು ಇಂದಿನಿಂದ ಬಿಟ್ಟರೆ ನಮಗೆ ಅಷ್ಟೇ ಸಾಕು. ನಾವೂ ಯಾವುದೋ ಒಂದು ಧರ್ಮಕ್ಕಾಗಿ ಹೊಡೆದಾಡುತ್ತಿದ್ದೇವೆ. ಒಳ್ಳೆಯದು, ನೀವು ನಿಮ್ಮ ಅನುಕೂಲ್ಯವನ್ನು ನೋಡಿಕೊಂಡು ನಿಮ್ಮ ಸ್ಥಳಕ್ಕೆ ಹೊರಡಬಹುದು.

**ಮುಲಾನಾ—**ನಾನು ಧನ್ಯನು. ಈಕೆಯನ್ನು ಏನು ಮಾಡುವಿರಿ?

**ಶಿವಾಜಿ—** ಆಕೆ ಯಾರು? ಯಾರೋ ನಿಮ್ಮ ಸಂಸಾರದವರೆಂದು ತಿಳಿದೆನು.

**ಮುಲಾನಾ—**ಈಕೆ ನನ್ನ ಸೋದರ ಸೊಸೆ. ಇವಳನ್ನು ತನಗೆ ಕೊಡಲಿಲ್ಲವೆಂದೇ ನಿಮ್ಮ ಖಾನರು ನಮಗೆ ವಿರೋಧವನ್ನು ನಡೆಸಿದ್ದು.

**ಶಿವಾಜಿ—** ಆಬಾಜಿ ಇದೇನು? ಈಕೆಯನ್ನು ಏಕೆ ಕರೆತಂದಿರಿ?

**ಆಬಾಜಿ—** ಈಕೆಯ ವಿಷಯದಲ್ಲಿಯೇ ಕಾಸೀಂ ಖಾನರು ಮಹಾಸ್ವಾಮಿಯವರಲ್ಲಿ ಅರಿಕೆ ಮಾಡಿದ್ದದ್ದು. ಆಕೆ ಅವರ ಜೊತೆಗೆ ಹೋಗುವುದಕ್ಕೆ ಒಪ್ಪಲಿಲ್ಲ. ಅದರಿಂದ ಕರೆತಂದೆವು.

**ಶಿವಾಜಿ—** ಇದು ಹೊಸ ಪದ್ಧತಿ! ಆಕೆ ಕಾಸೀಂ ಖಾನರ ಜೊತೆಗೆ ಹೋಗುವುದಿಲ್ಲವೆಂದ ಮಾತ್ರಕ್ಕೆ ಇಲ್ಲಿಗೆ ಕರೆತರಬೇಕಾಗಿರಲಿಲ್ಲ.

**ಕಾಸೀಂ—** ಮಹಾರಾಜ! ಈಕೆ ಬಹು ಸುಂದರಿ. ತಮ್ಮ ಜನಾನಾಕ್ಕೆ ಸೇರಿಸಿಕೊಳ್ಳುವುದಾದರೂ ಆಗಬಹುದು. ಆಕೆಯನ್ನು ಒಂದು ಸಲ ನೋಡಿ.

**ಶಿವಾಜಿ—** ಅಮ್ಮಾ ನೀನು ಬುರುಕಿಯನ್ನು ತೆಗೆಯುವುದಾದರೆ ಕಾಸೀಂ ಖಾನರು ನಿನ್ನನ್ನು ಒಂದುಸಲ ನೋಡುವರು.

ಸುಂದರಿ— (ಬುರುಕಿಯನ್ನು ತೆಗೆದು) ಮಹಾರಾಜ, ನನ್ನನ್ನು ರಕ್ಷಿಸಬೇಕು.

ಶಿವಾಜಿ— ನಿನಗೆ ಏನಾಗಬೇಕು?

ಸುಂದರಿ— ನನ್ನನ್ನು ನನ್ನ ಇನ್ನೊಬ್ಬ ಮಾವನ ಮಗನಿಗೆ ಕೊಡುವುದೆಂದು ಮಾತಾಗಿತ್ತು. ನನ್ನನ್ನು ಅವರ ಹತ್ತಿರಕ್ಕೆ ಕಳುಹಿಸಿಕೊಡಬೇಕು.

ಶಿವಾಜಿ— ಕಾಸೀಂಖಾನರನ್ನು ಮದುವೆಯಾಗಲು ಇಷ್ಟವಿಲ್ಲವೋ?

ಸುಂದರಿ— ಇಲ್ಲ.

ಶಿವಾಜಿ— ನನ್ನನ್ನು?

ಸುಂದರಿ— ಇಲ್ಲ.

ಶಿವಾಜಿ— ಯಾಕೆ?

ಸುಂದರಿ— ನೀವು ಬಹಳ ಕಪ್ಪು.

ಶಿವಾಜಿ— (ನಗುತ್ತ) ನಿಜ. ನಮ್ಮ ತಾಯಿ ನಿನ್ನಂತೆ ರೂಪವತಿಯಾಗಿದ್ದಿದ್ದರೆ ನನ್ನ ಮೋರೆ ಇನ್ನೂ ಸ್ವಲ್ಪ ಚೆನ್ನಾಗಿರುತ್ತಿತ್ತು (ಎಂದು ತಾನಾಜಿಯ ಕಡೆ ತಿರುಗಿ) ಆದರೆ ತಾನಾಜಿ, ಆಗ್ಗ ಬೆಕ್ಕನ್ನು ಕಂಡರೆ ನಡುಗುತ್ತಿದ್ದೇನೇನೊ? ಏಕೆ ನಗುವೆ?

ತಾನಾಜಿ— ಎಲ್ಲರೂ ನಗುತ್ತಿದಾರೆ.

ಶಿವಾಜಿ— ಅಮ್ಮಾ ನಿನಗೆ ನಮ್ಮಿಬ್ಬರನ್ನೂ ಮದುವೆಯಾಗಲು ಇಷ್ಟವಿಲ್ಲವಾದದ್ದರಿಂದ ನೀನು ಯಾರನ್ನು ಮದುವೆಯಾಗಬೇಕೆಂದಿದ್ದೀಯೊ ಅವರಲ್ಲಿಗೆ ಹೋಗಬಹುದು. ಮೋರೋಪಂತರೆ, ಇದನ್ನು ನೋಡಿ ಏರ್ಪಾಡು ಮಾಡಿ.

ಪಿಂಗಳೆ— ಅಪ್ಪಣೆ.

ಕಾಸೀಂ— ಮಹಾರಾಜ! ಇವಳಿಗಾಗಿ ನಾನು ಇಷ್ಟನ್ನೂ ಮಾಡಿದೆ. ಇವಳನ್ನು ನನಗೆ ಕೊಡಬೇಕು.

ಶಿವಾಜಿ— ಖಾನ್ ಸಾಹೇಬ್, ಆಕೆಯ ಇಷ್ಟಕ್ಕೆ ವಿರೋಧವಾಗಿ ಅವಳನ್ನು ನಿಮಗೆ ಕೊಡಲು ಆಗುವುದಿಲ್ಲ. ನಿಮಗೆ ಬೇರೆ ವಿಧದಲ್ಲಿ ಕೃತಜ್ಞತೆಯನ್ನು ತೋರಿಸುತ್ತೇನೆ. ಮುಲಾನಾ ಸಾಹೇಬ್, ಇನ್ನೇನು?

ಮುಲಾನಾ—ಮಹಾರಾಜಾ, ನಿಮ್ಮ ಗುಣವನ್ನು ನಾನು ವರ್ಣಿಸಲಾರೆ.

ಶಿವಾಜಿ— ಅದಕ್ಕಾಗಿಯೇ ಮಹಾರಾಜಾ ಎಂದು ಮರ್ಯಾದೆ ಮಾಡು ವಿರೋ? ನಾನು ರಾಜನೇ ಅಲ್ಲ.

ಮುಲಾನಾ—ರಾಜರಲ್ಲದಿದ್ದರೂ ರಾಜರಾಗುವುದಕ್ಕೆ ತಕ್ಕವರು ನೀವು. ನಮ್ಮ ಸವಾಬರು ಇಂಥವರಾಗಿದ್ದಿದ್ದರೆ ಮಹಮ್ಮದೀಯರ ಸ್ಥಿತಿ ಏನಾಗಿರುತ್ತಿತ್ತೊ. ಅಯ್ಯಾ, ನೀವು ಕಾದಿ, ರಾಜ್ಯವನ್ನು ಕಟ್ಟಿ, ರಾಜರಾಗಿ, ಜನಗಳನ್ನು ಸುಖವಾಗಿ ನೋಡಿಕೊಳ್ಳಿ.

ಶಿವಾಜಿ— ನಿಮ್ಮಂತಹ ವೀರರು ನಮಗೆ ವಿರೋಧಿಗಳಾದರೆ ನಾವು ರಾಜ್ಯ ವನ್ನು ಕಟ್ಟುವುದು ಹೇಗೆ?

ಮುಲಾನಾ—ನಾನು ವೀರನೋ ಅಲ್ಲವೋ—ನಾನಂತೂ ಮತ್ತೆ ನಿಮ್ಮೊಂದಿಗೆ ಕಾದುವುದಿಲ್ಲ. ನಾನು ಮಕ್ಕಾವಿಗೆ ಪ್ರಯಾಣ ಮಾಡುತ್ತೇನೆ. ಸಾಧ್ಯವಾದರೆ ನಿಮಗೆ ಸಹಾಯಕ್ಕೆ ನಿಲ್ಲಬೇಕು. ನನಗೆ ಅದು ಇಷ್ಟವಿಲ್ಲ. ಅಪ್ಪಣೆಯಾದರೆ ನಾನು ಹೊರಡುತ್ತೇನೆ.

ಶಿವಾಜಿ— ಆಗಬಹುದು.

ಮುಲಾನಾ ಸುಂದರಿ ಪಹರೆಯವರು ಹೋಗುವರು.

ಸೇವಕನೊಬ್ಬನು ಪ್ರವೇಶಿಸಿ

ಸೇವಕ— ಮಹಾಸ್ವಾಮಿ, ರಾಣಾ ಜಯಸಿಂಹರವರಿಂದ ನಿಯೋಗಿ ಬಂದಿ ದ್ದಾನೆ. ಪುರಂದರಗಡದಿಂದ ಬೇಹಿನವರು ವರ್ತಮಾನ ತಂದಿದ್ದಾರೆ.

ಶಿವಾಜಿ— ತಾನಾಜಿ, ಪತ್ರವೇನಾದರೂ ಇದ್ದರೆ ತೆಗೆದುಕೊಂಡು ಬನ್ನಿ. ಪಂತರೆ, ಕಾಸೀಂ ಖಾನರನ್ನು ಮರ್ಯಾದೆಯಿಂದ ನೋಡಿಕೊಳ್ಳಿ. ಎಲ್ಲರೂ ಹೊರಡಲಿ.

ಎಲ್ಲರೂ ನಮಸ್ಕಾರಮಾಡಿ ಹೊರಡುವರು. ತಾನಾಜಿ ಬೇಹಿನವರೊಂದಿಗೆ ಪತ್ರಗಳನ್ನು ತರುವನು. ಪರದೆ ಬೀಳುವುದು.

---

## ಸ್ಥಾನ ೨

ಶಿವಾಜಿಯ ವಾಸಗೃಹದ ಮುಂಭಾಗ. ಶಿವಾಜಿ, ತಾನಾಜಿ, ಪಿಂಗಳೆ.

ಶಿವಾಜಿ— ಕಲ್ಯಾಣ ನಮ್ಮ ವಶವಾಯಿತೆಂಬ ಸಂತೋಷದಲ್ಲಿರುವಾಗ ವಜ್ರಗಡ ಅವರ ಕೈಸೇರಿತು ಎಂಬ ವಾರ್ತೆ; ಪುರಂದರಗಡದ ರಕ್ಷಣೆಯಲ್ಲಿ ಮುರಾರಿ ಬಾಜಿ ಪ್ರಭು ತೀರಿಹೋದರು ಎಂದು ವರ್ತಮಾನ. ಇದೇನು ನಮ್ಮ ಅದೃಷ್ಟ; ಭವಾನಿಯ ಇಚ್ಛೆ? ವಜ್ರಗಡ ಹೋದಂತೆ ಪುರಂದರಗಡವೂ ಹೋಗಿದ್ದರೆ ನಾನು ಬೇಡವೆನ್ನುತ್ತಿರಲಿಲ್ಲ. ಮುರಾರಿ ಪ್ರಭುವನ್ನು ಕಳೆದುಕೊಂಡೆ ನಲ್ಲಾ. ಕೋಟೆಯನ್ನು ಹಿಡಿದಿರುವುದು ಕಷ್ಟವಾಗಿದೆ, ಬಿಟ್ಟುಕೊಡುತ್ತೇನೆಂದಿದ್ದರೆ ಬೇಡವೆನ್ನುತ್ತಿದ್ದೆನೆ. ಇವರೇಕೆ ಹೋಗಿ ಜೀವ ಕಳೆದುಕೊಂಡರು.

ತಾನಾಜಿ— ಕೋಟೆಯನ್ನು ಬಿಟ್ಟುಕೊಟ್ಟು ಆತನು ಸ್ವಾಮಿಯೆದುರಿಗೆ ನಿಲ್ಲುವುದು ಸಾಧ್ಯವೆ ಮಹಾಸ್ವಾಮಿ? ನಾವು ಯಾರೇ ಆದರೂ ಹೀಗೆ ಮಾಡತಕ್ಕದ್ದೇ ಧರ್ಮ. ಪುರಂದರಗಡವನ್ನು ಬಿಟ್ಟು ಕೊಟ್ಟಿದ್ದರೆ ದಿಲೇರ್ ಖಾನ್ ಜಯಸಿಂಹರನ್ನು ಹಿಡಿಯುವರಾರು? ಈಗ ಅವರಿಗೆ ಮರಾಟೆಯವರು ಎಂತಹವರೆಂದು ತಿಳಿದಂತಾ ಯಿತು. ಕೋಟೆ ನಮ್ಮ ಕೈಯಲ್ಲಿರುವ ತನಕ ಅವರು ನಮ್ಮ ಮಾತನ್ನು ಕೇಳಬೇಕು. ಅದು ಅವರ ಕೈಗೆ ಸಿಕ್ಕಿದ್ದರೆ ನಾವು ಅವರ ಮಾತನ್ನು ಕೇಳಬೇಕಾಗುತ್ತಿತ್ತು.

ಪಿಂಗಳೆ— ಮುರಾರಿರಾವ್ ತೀರಿಹೋದದ್ದು ದೊಡ್ಡನಷ್ಟ. ಆದರೆ ಅವರು ಹಾಗೆ ಮಾಡದೆ ಸೋತು ಬಂದಿದ್ದರೆ ತಪ್ಪಿತಸ್ಥರಾಗುತ್ತಿದ್ದರು. ಜಯಸಿಂಹ ಮಹಾರಾಜರು ತಮ್ಮನ್ನು ದಯಮಾಡಿಸಬೇಕೆಂದು ಕೇಳಿದಾರಷ್ಟೆ. ಹೋಗಿ ನೋಡೋಣವಾಗಲಿ. ಅವರೇನೂ ನಮ್ಮಮೇಲೆ ಹೆಮ್ಮೆ ತೋರುವ ಸ್ಥಿತಿಗೆ ಬಂದಿಲ್ಲ. ವಿವೇಕವಾಗಿ ಸಮ್ಮತಿಗೆ ಬರುವುದಾದರೆ ಕೌಲು ಮಾಡಿಕೊಳ್ಳುವುದು, ಇಲ್ಲ ದಿದ್ದರೆ ಪುನಃ ಕಾದುವುದು. ಇದೇ ಸರಿ.

ಶಿವಾಜಿ— ಬಾದಷಹರು ನನ್ನನ್ನು ದೆಹಲಿಗೆ ಬರಮಾಡಿಕೊಳ್ಳಬೇಕೆಂದು ಅಪೇಕ್ಷಿಸುತ್ತಾರೆಂದು ಬರೆದಿದಾರೆ.

ಪಿಂಗಳೆ— ದೆಹಲಿಗೆ ಹೋಗುವ ವಿಚಾರ ನಾನು ಒಪ್ಪಲಾರೆ. ಇವರಲ್ಲಿ ಯಾರನ್ನೂ ನಂಬುವಂತಿಲ್ಲ. ಅಫಜಲ್‌ಖಾನ ಎಂಥ ಯೋಗ್ಯ ಎಂತ ಇದ್ದೆವು. ಅವನೇ ಹಾಗೆ ಮಾಡಿದ.

ಶಿವಾಜಿ— ಹಾಗೆ ನೋಡಿದರೆ ಈಗ ಜಯಸಿಂಹ ಮಹಾರಾಜರನ್ನು ಕಾಣು ವುದಕ್ಕೆ ಹೋಗುವುದೇ ತಪ್ಪು.

ಪಿಂಗಳೆ— ಹೌದು.

ಶಿವಾಜಿ— ಆದರೆ ಹೋಗದೆ ಇಲ್ಲಿ ಇದ್ದು ಎಲ್ಲಾ ಮಾತನ್ನೂ ಆಡುವುದಕ್ಕೆ ಆಗುವುದಿಲ್ಲ. ಅವರನ್ನು ನಮ್ಮಲ್ಲಿ ಬನ್ನಿ ಎಂದರೆ ಈ ಕತೆ ಆ ಕತೆ ಕೇಳಿದ್ದಾರೆ, ನಾವು ಅವರಲ್ಲಿ ಹೋಗುವುದಕ್ಕೆ ಹಿಂತೆಗೆಯುವಂತೆ ಅವರು ನಮ್ಮಲ್ಲಿ ಬರಲು ಹಿಂತೆಗೆಯುತ್ತಾರೆ. ಅಂತೂ ಪುರಂದರ ಗಡಕ್ಕೆ ಇನ್ನು ಹೆಚ್ಚು ಕಷ್ಟವಾಗುವುದಕ್ಕೆ ಬಿಡಬಾರದು. ನಾನು ಇಂದೇ ಜಯಸಿಂಹ ಮಹಾರಾಜರನ್ನು ನೋಡುವುದಕ್ಕೆ ಹೊರಡಬೇಕು.

ಪಿಂಗಳೆ— ನಾವೂ ಜೊತೆಯಲ್ಲಿ ಬರುತ್ತೇವೆ.

ಶಿವಾಜಿ— ನೀವು ನಮ್ಮ ಮಾತನ್ನು ನಡೆಯಿಸಿ. ಒಂದು ಕೆಲಸಕ್ಕೆ ಒಂದು ಜೀವ ಸಂಚಕಾರವಾಗುವುದು ಸಾಕು. ಒಬ್ಬರಿಗಾಗಿ ಇನ್ನಿಬ್ಬರು ಹೋಗಿ ಅವರ ಕೈಯಲ್ಲಿ ಸಿಕ್ಕಿಕೊಂಡರೆ ಏನು ಪ್ರಯೋಜನ? ಅಂಬಾಭವಾನಿ ಕಾಪಾಡುತ್ತಾಳೆ. ಆಗಿನ ಹಾಗೆ ಈಗಲೂ ನನ್ನ ಜೊತೆಯಲ್ಲಿ ಜೀವಾಜಿಯನ್ನೂ ಕಾವಜೀಯನ್ನೂ ಕರೆದುಕೊಂಡು ಹೋಗುತ್ತೇನೆ. ನೀವು ಇಲ್ಲೇ ಇರಿ.

ಪಿಂಗಳೆ— ಅಪ್ಪಣೆ.

ಶಿವಾಜಿ— ಮುರಾರಿ ಪ್ರಭುಗಳ ಮಗನನ್ನು ತಾನಾಜಿಯ ದಳದಲ್ಲಿ ಸೇರಿಸಿಕೊಳ್ಳಿ ಮೋರೋಪಂತರೆ. ಅವರ ಮನೆಗೆ ವೇತನ ಸಲ್ಲುವುದಕ್ಕೆ ಏರ್ಪಾಡು ಮಾಡಿ.

**ಪಿಂಗಳೆ**— ಅಪ್ಪಣೆ. ಕಾದಿ ಮಡಿದವರ ಪಟ್ಟಿ ಇಷ್ಟರಲ್ಲೇ ಬರುತ್ತದೆ ಆಗ ಇತರರ ವಿಷಯವಾಗಿ ಏನು ವ್ಯವಸ್ಥೆ ಮಾಡಬೇಕೆಂದೂ ನೋಡುತ್ತೇನೆ.

**ಶಿವಾಜಿ**— ಸರಿ. ಉಳಿದ ಏರ್ಪಾಡೆಲ್ಲ ನೋಡಿ. (ಎಂದು ಹೊರಡುವನು. ಇವರೂ ಹಿಂದೆಯೇ ಹೋಗುವರು.)

---

## ಸ್ಥಾನ ೨

ಜೀಜಾಬಾಯಿಯ ಪೂಜಾಗೃಹ. ಅಂಬಾ ಭವಾನಿಯ ವಿಗ್ರಹದ ಸನ್ನಿಧಿಯಲ್ಲಿ.

**ಜೀಜಾ**— (ಸ್ತೋತ್ರ ಮಾಡುತ್ತಾಳೆ)

ಜಗದ ಜನನಿ ಜೀವದಾತೆ<br>
ಸಕಲ ದಿವಿಜ ವಿನುತೆ ಪೂತೆ<br>
ಆದಿಶಕ್ತಿ ನಾರಾಯಣಿ<br>
ಅಖಿಲದೈತ್ಯ ಸಂಹಾರಿಣಿ<br>
ಮಾತೇ—ಲೋಕಮಾತೇ ॥

ರಾಮದಾಸನು ಪ್ರವೇಶಿಸುವನು. ಜೀಜಾಬಾಯಿ ಅವನನ್ನು ಕಾಣದೆ ಸ್ತೋತ್ರ ಮಾಡುತ್ತಿರುವಳು.

ಆರ್ಯಧರ್ಮ ಮಲಿನವಾಗಿ<br>
ಮರುಗಿ ಕೊರಗುತಿರುವುದೀಗ<br>
ಈಗಳೆ ಅದ ಪೊರೆಯೆ ತಾಯೆ<br>
ಬೇಗಬಾ ಭವಸಜಾಯೆ<br>
ಮಾತೇ—ಲೋಕಮಾತೇ ॥

ಭಕ್ತವೃಂದ ಹೃದಯದಲ್ಲಿ<br>
ಶಕ್ತಿ ನೀನು ಬಂದು ನಿಲ್ಲು<br>
ಬಲವ ಛಲವ ನೀಡಿ ಅವರ<br>
ಸೇವೆಕೊಂಡು ಸಲಹು ಜನರ<br>
ಮಾತೇ—ಲೋಕಮಾತೇ ॥

ಚಂಡಿ ಚಾಮುಂಡಿ ಕಾಳಿ
ದುರ್ಗೇ ಅಂಬಾ ಭವಾನಿ
ಮ್ಲೇಚ್ಛಗಣ ಭಯಂಕರೀ
ಉಮಾ ಗೌರಿ ಶಂಕರೀ
ಮಾತೇ—ಲೋಕಮಾತೇ ॥

ತಾಯೇ, ಲೋಕ ಮಾತೆಯೇ, ಮಲಿನವಾಗುತ್ತಿರುವ ಆರ್ಯ ಧರ್ಮವನ್ನು ಉದ್ಧರಿಸು. ದುಃಖಿತರಾಗಿರುವ ಆರ್ಯಜನ ವನ್ನು ಸಂರಕ್ಷಿಸು. ನಿನ್ನ ಕುವರನಿಂದ ಸೇವೆಯನ್ನು ಕೈಕೊಂಡು ನಮ್ಮ ಜನ್ಮವನ್ನು ಸಾರ್ಥಕಮಾಡು. ಅಂಬಾ! ಭವಾನಿ! (ಎಂದು ನಮಸ್ಕರಿಸಿ ಕಣ್ಣು ತೆರೆಯುವಳು.)

ರಾಮ— ಪೂಜೆ ಮುಗಿಯಿತೆ, ತಾಯಿ!

ಜೀಜಾ— ಮುಗಿಯಿತು ಗುರುದೇವ. ತಾವು ಬಂದದ್ದು ನನಗೆ ತಿಳಿಯಲಿಲ್ಲ.

ರಾಮ— ನಾನೂ ಈಗತಾನೇ ಬಂದೆ. ಶಿವ ಇನ್ನೂ ಹಿಂತಿರುಗಿ ಬರ ಲಿಲ್ಲವೆ?

ಜೀಜಾ— ಈಗ ಬರಬೇಕು. ಆದರೆ ಇಂದು ಏನೋ ಅನಿಷ್ಟ ಸೂಚನೆ ತೋರಿತು. ಭವಾನಿಯ ಇಚ್ಛೆಯೇನಿರುವುದೋ ತಿಳಿಯಲಿಲ್ಲ.

ರಾಮ— ನಮಗೆ ತಿಳಿಯಬೇಕಾದದ್ದಿಲ್ಲ ತಾಯಿ. ಎಲ್ಲ ಭವಾನಿಯ ಇಚ್ಛೆ ಎಂದು ತಿಳಿದಮೇಲೆ ಇನ್ನೇನು ತಿಳಿಯಬೇಕು?

ಜೀಜಾ— ನನ್ನ ವಿಷಯದಲ್ಲಾದರೆ ನನಗೆ ಅದೇ ಭಾವನೆಯುಂಟು. ಶಿವನ ವಿಷಯದಲ್ಲಿ ಮನಸ್ಸು ಇನ್ನೂ ಅಷ್ಟು ಧಾರಾಳವಾಗಿಲ್ಲ. ನಾನೂ ಅವನಿಗೆ ತಾಯಿ ಎಂಬ ಭ್ರಾಂತಿ ಇನ್ನೂ ಬಿಟ್ಟಿಲ್ಲ.

ಶಿವಾಜಿ ಪ್ರವೇಶಿಸುವನು.

ಶಿವಾಜಿ— ಮಾಯಿಾ!

ಜೀಜಾ— ಬಾ ಶಿವ. ಸ್ವಾಮಿಗಳು ದಯಮಾಡಿಸಿದಾರೆ.

ಶಿವಾಜಿ— ಗುರುದೇವರಿಗೆ ವಂದನೆ (ನಮಸ್ಕರಿಸುವನು).

ರಾಮ— ನಿನಗೆ ಶುಭವಾಗಲಿ.

ಜೀಜಾ— ಜಯಸಿಂಹ ಮಹಾರಾಜರನ್ನು ನೋಡಿದ್ದೆಯ! ಏನು ಹೇಳಿದರು?

ಶಿವಾಜಿ— ಬಾದಷಹರು ನಾನು ಅವರ ಮೈತ್ರಿಯನ್ನು ಬೆಳೆಯಿಸ ಬೇಕೆಂದೂ, ಅದರ ಚಿಹ್ನೆಯಾಗಿ ದೆಹಲಿಗೆ ಅವಶ್ಯವಾಗಿ ಬರ ಬೇಕೆಂದೂ ಹೇಳಿಕಳುಹಿಸಿದಾರಂತೆ.

ಜೀಜಾ— ಮ್ಲೇಚ್ಛ ಬಾದಷಹನ ಪರವಾಗಿ ಈ ನೀಚ ರಜಪೂತನು ಬಂದನೋ?

ಶಿವಾಜಿ— ಜಯಸಿಂಹನು ನೀಚನೇನಲ್ಲ. ಆದರೆ ಇವರೆಲ್ಲ ಅವರಿಗೆ ದಾಸ ರಾಗಿರುವುದನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ.

ಜೀಜಾ— ಜೀವಹೇಡಿಗಳು. ಆರ್ಯಧರ್ಮವನ್ನು ಸಂರಕ್ಷಿಸಬೇಕಾದವರು ಆರ್ಯಧರ್ಮ ವಿದ್ವೇಷಿಗಳಿಗೆ ದಾಸರಾಗಿದಾರೆ.

ರಾಮ— ಭಗವದಿಚ್ಛೆಯೊಂದಿದೆಯಲ್ಲ ತಾಯಿ. (ಶಿವಾಜಿಗೆ) ಹೋಗುವು ದೆಂದು ನಿರ್ಧರಿಸಿದೆಯಾ?

ಶಿವಾಜಿ— ಮಾತೃಶ್ರೀಯವರ ಅಪ್ಪಣೆಯನ್ನು ಪಡೆದು ಎಲ್ಲವನ್ನೂ ನೋಡಿ ಕೊಂಡು ಹೋಗೋಣವೆಂದು ಬಂದೆ.

ರಾಮ— ಒಳ್ಳೆಯ ಮಾತು.

ಜೀಜಾ— ನೀನು ದೆಹಲಿಗೆ ಹೋಗಿ ಆಗಬೇಕಾದದ್ದೇನು?

ಶಿವಾಜಿ— ನಾನು ಇಲ್ಲಿ ಏನು ಮಾಡಿದರೂ ನಾಲ್ಕು ಕಡೆಯೂ ಮುಸ ಲ್ಮಾನರು. ನನ್ನದೊಂದು ರಾಜ್ಯವಿದೆಯೆಂದು ಹೇಳುವಂತಿಲ್ಲ, ನನಗೆ ಅಧಿಕಾರವಿಲ್ಲ. ಬಾದಷಹನ ಅಪ್ಪಣೆಯನ್ನು ಪಡೆದು ಕೊಂಡರೆ ಇದನ್ನೂ ಒಂದು ರಾಜ್ಯವೆನ್ನಬಹುದು.

ಜೀಜಾ— ಈಗ ನಿನ್ನದು ರಾಜ್ಯವಲ್ಲವೇನು?

ಶಿವಾಜಿ— ನನ್ನದು ರಾಜ್ಯವೆಂದು ನಮ್ಮವರೇ ಒಪ್ಪುವುದಿಲ್ಲ. ಕೆಂಪು ಜನರು ಬೇರೆ ಅಲ್ಲಲ್ಲಿ ಪಾಳೆಯಗಳನ್ನು ಮಾಡಿಕೊಳ್ಳುತ್ತಿದ್ದಾರೆ. ಸುಂಕ ಕೇಳಿದರೆ ಬಾದಷಹನ ಜನಕ್ಕೇ ನಾವು ಕೊಡುವುದು ಎನ್ನುತ್ತಿದಾರೆ. ಬಾದಷಹನ ಸಮ್ಮತಿಯನ್ನು ಪಡೆದರೆ ಎಲ್ಲರೂ ನಮ್ಮ ವಶವರ್ತಿಗಳಾಗುವರು. ಅದುವರೆಗೆ ನಾನು ಬರಿಯ ಒಬ್ಬ ದರೋಡೆಗಾರ.

ಜೀಜಾ— ನೀನು ಒಬ್ಬ ದರೋಡೆಗಾರ ಎಂದರೆ ಔರಂಗಜೇಬ ಒಬ್ಬ ದರೋಡೆಗಾರನ ಮರಿಮಗ. ನಿನ್ನದಾದ ರಾಜ್ಯದಲ್ಲಿ ಕೆಂಪು ಜನರು ಸುಂಕ ಕೊಡುವುದಿಲ್ಲವೆಂದರೆ ಅವರನ್ನು ಶಿಕ್ಷಿಸು.

ಶಿವಾಜಿ— ಎಲ್ಲರ ಸಂಗಡಲೂ ಯುದ್ಧಮಾಡುತ್ತಿದ್ದರೆ ರಾಜ್ಯಕ್ಕೆ ಸ್ವಾಸ್ಥ್ಯ ವಿಲ್ಲ. ಬಿಜಾಪುರದೊಂದಿಗೆ ಯುದ್ಧ, ಬಾದಷಹನೊಂದಿಗೆ ಯುದ್ಧ. ಇದರಲ್ಲಿ ನಮ್ಮ ವೀರರ ಬಲಿ ನಡೆಯುತ್ತಲೇ ಇದೆ. ಜಯ ನಮಗೇ ಬರುತ್ತದೆ ಎನ್ನುವಂತಿಲ್ಲ. ಕಾಲವೆಲ್ಲ ಯುದ್ಧದಲ್ಲಿ ಕಳೆಯುತ್ತಿದೆ. ಅವರ ಸಮ್ಮತಿಯನ್ನು ಪಡೆದರೆ ಕೆಲಸ ಸುಲಭವಾಗಬಹುದು.

ಜೀಜಾ— ನಿನ್ನ ರಾಜ್ಯ ಕಟ್ಟುವುದಕ್ಕೆ ಅವರ ಸಮ್ಮತಿ ಏಕೆ? ಯಜ್ಞ ಮಾಡುವುದಕ್ಕೆ ರಾಕ್ಷಸನ ಅನುಗ್ರಹ ಕೇಳುವುದೆ? ಆದರೂ ಹೋಗಿಬಾ ಶಿವಾ. ನಾನೆಷ್ಟಾದರೂ ಹೆಂಗಸು. ನನ್ನ ಮನಸ್ಸಿನಲ್ಲಿ ನಿನಗೆ ಔರಂಗಜೇಬನು ಏನು ತೊಂದರೆ ಮಾಡುವನೋ ಎಂದು ಹೆದರಿಕೆ ಇದೆ. ಅದರಿಂದ ಅತ್ತುಮಾಡುತ್ತೇನೆ. ಆದರೆ ನಿನಗೆ ಅವನೇನು ಮಾಡಿಯಾನು? ನಿನ್ನನ್ನು ಅಂಬಾ ಭವಾನಿ ಸಂರಕ್ಷಿಸುವಳು. ಎಲ್ಲ ಸಮಯದಲ್ಲಿಯೂ ಧೈರ್ಯದಿಂದ ನಡೆ, ಅಷ್ಟೇ.

ರಾಮ— ಹಾಗೆ ಮಾಡು ಶಿವಾ, ಹೋಗಿಬಾ. ದುಷ್ಟರು ತೊಂದರೆ ಕೊಡುವ ಸಂಭವವುಂಟು. ಎಲ್ಲ ಸಮಯದಲ್ಲೂ ಈಶ್ವರ ಪ್ರೇರಣೆಯನ್ನು ಅನುಸರಿಸಿ ನಡೆ.

ಶಿವಾಜಿ— ಅಪ್ಪಣೆ. ನಾನು ಪುನಃ ಬರುವವರೆಗೆ ತಾಯಿಯವರು ರಾಜ್ಯದ ಸೂತ್ರವನ್ನು ಹಿಡಿದಿರುವುದಕ್ಕೆ ಏರ್ಪಾಡಾಗಿದೆ. ದುರ್ಗಗಳಿಗೆಲ್ಲ ತಿಳಿಸಿದೆ. ಅಧಿಕಾರಿಗಳ ಮಂಡಲಿಯೆಲ್ಲ ಇದೇ ಸರಿಯೆಂದು ತೀರ್ಮಾನ ಮಾಡಿತು. ನಾನು ನಾಳೆ ಹೊರಡುತ್ತೇನೆ.

ಜೀಜಾ— (ಅಂಬಾ ಭವಾನಿಗೆ) ತಾಯೇ! ನಿನ್ನ ಈ ಮಗುವನ್ನು ಸಂರಕ್ಷಿಸಿಕೊ. (ಶಿವಾಜಿಗೆ) ಆಗಲಿ ಶಿವಾ.

ರಾಮ— ನಿನಗೆ ಒಳ್ಳೆಯದಾಗಲಿ, ಶಿವಾ. ತಾಯಿ, ಶಿವನಿಗೆ ಅಂಬಾ ಭವಾನಿಯ ಪ್ರಸಾದವನ್ನು ಕೊಡು.

ಜೀಜಾ— (ಸ್ತೋತ್ರ ಮಾಡುತ್ತ) ಜಗದ ಜನನಿ....(ಮಗನಿಗೆ ಪ್ರಸಾದವನ್ನು ಕೊಡುವಳು. ಶಿವಾಜಿ ತಾಯಿಗೂ ಗುರುವಿಗೂ ನಮಸ್ಕರಿಸುವನು.)

ರಾಮ— ಶುಭಮಸ್ತು, ಶುಭಮಸ್ತು. (ಶಿವಾಜಿ ಹೊರಡುವನು) ತಾಯಿ! ಸ್ವಲ್ಪ ಕೀರ್ತನೆ ಮಾಡಲೆ?

ಜೀಜಾ— ಆಗಲಿ ಗುರುದೇವ.

ರಾಮ— ಕುಳ್ಳಿರು (ಎಂದು ಎರಡು ಕೀರ್ತನೆಗಳನ್ನು ಹಾಡುವನು).

---

## ಸ್ಥಾನ ೪

ಸಯಿಬಾಯಿಯ ವಾಸಗೃಹ.

ಮುಂದುಗಡೆ ಶಿವಾಜಿ ಮತ್ತು ಸಯಿಬಾಯಿ.

ಸಯಿ— ಎಲ್ಲ ಏರ್ಪಾಡನ್ನೂ ಮುಗಿಯಿಸಿ ಹೊರಡುವ ಮುಂಚೆ ನನಗೆ ಹೇಳುವುದಕ್ಕೆ ಬಂದಿರಾ?

ಶಿವಾಜಿ— ಮೊದಲೇ ಹೇಳಿದ್ದರೆ ನೀನು ಅಡ್ಡಿ ಮಾಡುತ್ತಿದ್ದೆ.

ಸಯಿ— ನಾನು ಅಡ್ಡಿ ಮಾಡುತ್ತಿದ್ದೆನೆ? ನಿಮ್ಮ ಕೆಲಸಕ್ಕೆಲ್ಲ ನಾನು ಅಡ್ಡಿ ಬರುವಳು ಎಂತ ತಿಳಿದುಕೊಂಡಿದೀರ?

ಶಿವಾಜಿ— ಅದೇನೂ ಇಲ್ಲ ಎನ್ನು. ಇನ್ನು ನಾನು ಬರಲೆ?

ಸಯಿ— ದೂರದೇಶಕ್ಕೆ ಇಂಥ ಕಷ್ಟದ ಕೆಲಸಕ್ಕೆ ಹೋಗುವವರು ನಿಮ್ಮ ಹಾಗೆ ಇದ್ದವರನ್ನು ನಾನು ಕಂಡು ಕೇಳಿದ್ದು ಇಲ್ಲ. ಇದೇನು, ಪಕ್ಕದ ಊರಿಗೆ ಹೋಗಿಬರುವವರಂತೆ ನಾನು ಬರಲೆ ಎನ್ನುವಿರಿ?

ಶಿವಾಜಿ— ಅಂಥ ಕಷ್ಟದ ಕೆಲಸವೇನು? ಇನ್ನು ಮೂರು ತಿಂಗಳಲ್ಲಿ ಬರುತ್ತೇನೆ.

ಸಯಿ— ಇದಕ್ಕೆ ನಿಮ್ಮ ತಾಯಿಯವರು ಹೇಗೆ ಒಪ್ಪಿದರು? ಅವರು ಬಹು ಕಲ್ಲೆದೆಯ ಹೆಂಗಸು!

ಶಿವಾಜಿ— ನೀನೂ ಅವರಂತೆ ಇರಬೇಕು ಸಯಿ!

ಸಯಿ— ನಾನು ಅವರಂತೆ ಹೇಗೆ ಆದೇನು? ನನಗೆ ಹಾಗೆ ಆಗಬೇಕೆಂದು ಇಷ್ಟವೂ ಇಲ್ಲ. ನಾನು ನಿಮ್ಮನ್ನು ಹೆತ್ತವಳಲ್ಲ; ನಿಮ್ಮ ಕೈಹಿಡಿದವಳು.

ಶಿವಾಜಿ— ನೀನು ನಿಮ್ಮತ್ತೆಯನ್ನು ಏನೋ ಎಂದು ಎಣಿಸಿರುವಂತೆ ತೋರುತ್ತದೆ. ಬಹಳ ಸಲ ಹೀಗೆ ಹೇಳುತ್ತಿರುತ್ತೀಯೆ.

ಸಯಿ— ನಾನು ಅವರನ್ನು ಏನು ಹೇಳಿದರೇನು? ನೀವು ಅವರ ವಿಷಯ ದಲ್ಲಿ ಮರ್ಯಾದೆಯಿಂದ ನಡೆದುಕೊಳ್ಳುತ್ತೀರಲ್ಲ. ಅವರಿಗದು ಸಾಲದೆ? ತಾಯಿ ಎನ್ನುವ ಭಕ್ತಿಯಲ್ಲಿ ನಿಮಗೆ ಹೆಂಡತಿಯ ಮೇಲಿನ ಪ್ರೀತಿಯೇ ಮರೆತುಹೋಗಿದೆ.

ಶಿವಾಜಿ— ಮರೆತಿದೆ ಎಂದು ನೀನು ತಿಳಿದುಕೊಂಡರೆ ನಾನು ಏನು ಮಾಡಲಿ. ಇಷ್ಟಕ್ಕೆ ತಾಯಿಯ ಮೇಲೆ ಭಕ್ತಿಯಿರುವುದು ತಪ್ಪೆ? ನಾನು ಅವರ ವಿಷಯದಲ್ಲಿ ತೋರುವ ಭಕ್ತಿಯನ್ನು ಸಾಂಬಾಜಿ ನಿನ್ನ ವಿಷಯದಲ್ಲಿ ತೋರುವಂತೆ ಅವನನ್ನು ಸಾಕು. ಅದು ನಿನಗೂ ಒಳ್ಳೆಯದು, ಅವನಿಗೂ ಒಳ್ಳೆಯದು.

ಸಯಿ— ನಾನು ಗಂಡನನ್ನು ಹೊಡೆದಟ್ಟಿದಾಗ್ಗ ಮಗನ ಭಕ್ತಿಯನ್ನು ಸಂಪಾದಿಸುವ ರೀತಿಯನ್ನು ಯೋಚಿಸುತ್ತೇನೆ. ನನಗೆ ನಿಮ್ಮ ಸೇವೆ ಬೇಕು.

ಶಿವಾಜಿ— ನನ್ನ ಸೇವೆ ನಿನಗೆ ಬೇಕಾದರೆ ನಮ್ಮ ತಾಯಲ್ಲಿ ಅಸೂಯೆ ಬೇಡ. ಈ ಅಜ್ಞಾನವನ್ನು ಬಿಡು. ಇನ್ನುಮೇಲೆ ನಮ್ಮ ತಂದೆ ತಾಯ ಮಾತನ್ನು ನೀನೆತ್ತಬೇಡ.

ಸಯಿ— ಹಾಗಾದರೆ ತಪ್ಪೆಲ್ಲ ನನ್ನದೇ ಆಯಿತು. ಇಂಥ ಕೆಲಸಕ್ಕೆ ಯೋಚನೆ ಮಾಡುವಾಗ ನೀವು ನಿಮ್ಮ ತಾಯನ್ನೂ ಆ ದಾಸರನ್ನೂ ಕೇಳಿದಿರಿ ಹೊರತು ನನ್ನನ್ನು ಒಂದು ಮಾತು ಕೇಳಲಿಲ್ಲ. ನೀವು ನನ್ನನ್ನು ಇಷ್ಟು ನಿರಾಕರಿಸಿದರೂ ನಾನು ಬಾಯಿ ಮುಚ್ಚಿಕೊಂಡಿರಬೇಕು ಅಲ್ಲವೇ?

ಶಿವಾಜಿ— ನಿನ್ನಂಥ ಪತಿವ್ರತೆಗೆ ಅದೇನು ಕಷ್ಟ. ಛೆ, ಬಿಡು, ಇದಕ್ಕೆ ಕಣ್ಣೀರೇಕೆ? ನೋಡಿದೆಯಾ, ನೀನು ಯಾವಾಗಲೂ ಹೀಗೆಯೇ.

ಇಲ್ಲದ ಜಗಳವನ್ನೆತ್ತಿ ಎರಡು ಮಾತನ್ನಾಡಿ ಎರಡು ಮಾತು ಕೇಳಿ ಅಳುತ್ತ ನಿಲ್ಲುವೆ. ನಾನೂ ಹಾಗೆಯೇ, ನೀನು ಏನೋ ಹೇಳಿದರೆ ಹೋಗಲಿ ಎನ್ನದಹಾಗೆ ಪ್ರತಿಯಾಗಿ ಏನಾದರೂ ಹೇಳುತ್ತೇನೆ. ನನ್ನ ಬುದ್ಧಿಯೆಲ್ಲ ಕತ್ತಿ ಹಿರಿಯುವುದರಲ್ಲಿ ವೆಚ್ಚವಾಯಿತು. ನನಗೆ ಸಂಸಾರವನ್ನು ನೋಡಿಕೊಳ್ಳುವ ವಿವೇಕವಿಲ್ಲದೆ ಹೋಯಿತು. ಎಲ್ಲಿ ಬಿಡು ಮತ್ತೆ. ಇನ್ನುಮೇಲೆ ಏನಾದರೂ ಯೋಚನೆ ಮಾಡುವಾಗ ನಿನ್ನನ್ನೂ ಕೇಳುತ್ತೇನೆ. ಸರಿಯೆ? ನಿಜವಾಗಿಯೂ ಕೇಳುತ್ತೇನೆ.

ಸಯಿ— (ಕಣ್ಣೀರನ್ನೊರಸಿಕೊಂಡು ನಗುತ್ತ) ಈಗಲೇ ಕೇಳಿ.

ಶಿವಾಜಿ— ಆಟದ ಮಾತಿಗೆ ಇದು ಸಮಯವಲ್ಲ.

ಸಯಿ— ಇನ್ನುಮೇಲೆ ಕೇಳುತ್ತೇನೆ ಎಂದದ್ದನ್ನು ಈಗಲೇ ಆರಂಭಿಸಿ ಎನ್ನುತ್ತೇನೆ. ಅಷ್ಟೆ. ಇದು ಆಟದ ಮಾತಲ್ಲ.

ಶಿವಾಜಿ— ಕೇಳಿದೆನಲ್ಲ. ನಾನು ದೆಹಲಿಗೆ ಹೊರಡಬೇಕು. ಹೋಗಿ ಬರಲೆ?

ಸಯಿ— ನೀವು ಹೋಗಕೂಡದು. ನನಗೇನೋ ಭಯವಾಗುತ್ತದೆ.

ಶಿವಾಜಿ— ಭಯಪಡುವುದಕ್ಕೆ ಏನೂ ಕಾರಣವಿಲ್ಲ.

ಸಯಿ— ನೀವು ಕಾರಣವಿಲ್ಲವೆನ್ನುವಿರಿ. ಅವರೋ ದುಷ್ಟರು. ನಿಮ್ಮನ್ನು ಕಂಡರೆ ಯಾರಿಗೂ ಆಗದು. ನಿಮ್ಮನ್ನು ಏನಾದರೂ ಮಾಡಿದರೆ ಏನು ಗತಿ!

ಶಿವಾಜಿ— ಇದನ್ನೆಲ್ಲ ನಾನು ಯೋಚಿಸಿದ್ದೇನೆ. ಜೊತೆಗೆ ಮೋರೋಪಂತರೂ ಇನ್ನೂರು ಭಟರೂ ಬರುವರು.

ಸಯಿ— ಮೊಗಲಾಯರ ಸೈನ್ಯಕ್ಕೆ ಇನ್ನೂರು ಭಟರು ಲೆಕ್ಕವೆ?

ಶಿವಾಜಿ— ಇನ್ನೂರು ಮರಾಟೆಯವರು! ಇನ್ನೂರು ಜನ ಮರಾಟೆಯವರು ಜೊತೆಗಿರುವಾಗ ನನಗೆ ತೊಂದರೆ ಮಾಡುವವರು ಯಾರು?

ಸಯಿ— ನೀವು ಒಬ್ಬರೇ ಇದ್ದರೂ ನಿಮಗೆ ಯಾರು ತೊಂದರೆ ಕೊಡುವವರು? ನಿಮ್ಮನ್ನು ದೇವರೇ ಕಾಯುತ್ತಾನೆ. ಹಾಗಾದರೆ ನೀವು ಹೊರಡಲೇ ಬೇಕೆ?

ಶಿವಾಜಿ— ಹೌದು, ಸಯಿಬಾ. ಇದೋ ಹೊರಡಬೇಕು. ಎಲ್ಲರೂ ಅಲ್ಲಿದ್ದಾರು. ನಿನಗೆ ಹೇಳಿಬರುವೆನೆಂದು ಬಂದೆ. ಬರಲೆ?

ಸಯಿಬಾ— (ಮುಗುಳುನಗೆಯಿಂದ) ಮೊಗಲಾಯಿ ಹೆಂಗಸರು ಬಹಳ ಚೆಲುವೆಯರಂತೆ. ಯಾರಾದರೂ ಮರುಳು ಮಾಡಿಯಾರು ಜೋಕೆ. ಬೇಗನೆ ಬಂದುಬಿಡಿ.

ಶಿವಾಜಿ— (ತಾನೂ ಸ್ವಲ್ಪ ನಗುತ್ತ) ಏಕೆ ಮುಲಾನಾ ಸೊಸೆಯ ಮಾತನ್ನು ಮರೆತೆಯ?

ಸಯಿಬಾ— (ಅರ್ಧ ನಗುತ್ತ ಅರ್ಧ ಕೋಪದಿಂದ) ನಿಜವಾಗಿ ಆ ಹುಡುಗಿ ಇಲ್ಲಿದ್ದಿದ್ದರೆ ಅವಳಿಗೆ ಕೆನ್ನೆಗೆರಡೇಟು ಕೊಡಬಹುದಾಗಿತ್ತು. ನಿಮ್ಮನ್ನು ಕಪ್ಪು ಎಂದಳೆ? ಎಂಥಾ ಹುಡುಗಿ!

ಶಿವಾಜಿ— ನಿಜ ಹೇಳಿದರೆ ಎಷ್ಟು ಜನಕ್ಕೆ ಕೋಪ ನೋಡಿದೆಯಾ? ತಿಳಿಯದ ಹುಡುಗಿ ಹೇಳಿತು. ಅದೂ ಮದುವೆಯಾದ ಮೇಲೆ ಕಲಿಯುತ್ತೆ; ನಿನ್ನ ಹಾಗೆ ಗಂಡ ಕಪ್ಪಗಿದ್ದರೂ ಬೆಳ್ಳಗಿದ್ದಾನೆ ಎಂತ ಹೇಳುವುದನ್ನು. ಇನ್ನು ನಾನು ಬರಲೆ?

ಸಯಿಬಾ— ಹೋಗಿಬನ್ನಿ (ಎಂದು ನಮಸ್ಕರಿಸುವಳು).

ಶಿವಾಜಿ ಎತ್ತಿ ನಿಲ್ಲಿಸುವನು. ಹೊರಗಡೆಯಿಂದ ಜೀಜಾಬಾಯಿ ಶಿವಾ ಶಿವಾ ಎಂದು ಕೂಗುವಳು. ಪಿಂಗಳೆ ಪ್ರವೇಶಿಸುವನು.

ಪಿಂಗಳೆ— ಮಹಾರಾಜ್! ಹೊರಡುವ ಲಗ್ನ ಮೀರಿತು ಎಂದು ತಾಯಿಯವರ ಅಪ್ಪಣೆಯಾಯಿತು.

ಶಿವಾಜಿ— ಬಂದೆ. (ಸಯಿಬಾಬಾಯಿಗೆ) ಮಗುವನ್ನು ನೋಡಿಕೊ. ಅತ್ತೆಯವರ ವಿಷಯದಲ್ಲಿ ಸಮಾಧಾನವಾಗಿರು. ಬರುತ್ತೇನೆ (ಎಂದು ಹೊರಡುವನು).

ಸಯಿಬಾ— ಪಂತೋಜಿಯವರೆ.

ಪಿಂಗಳೆ— ತಾಯಿ.

ಸಯಿಬಾ— ನೀವು ಯಜಮಾನರ ಜೊತೆಗೆ ಹೋಗುವಿರಂತೆ. ಅವರು ಸ್ವಲ್ಪ ದುಡುಕು. ಎಚ್ಚರಿಕೆಯಿಂದ ನೋಡಿಕೊಳ್ಳಬೇಕು.

**ಪಿಂಗಳೆ**— ಅವರನ್ನು ನೋಡಿಕೊಳ್ಳುವುದೇನು ತಾಯಿ! ಅಂಬಾ ಭವಾನಿಯ ಅನುಗ್ರಹದ ಮೇಲೆ ನಮ್ಮ ಮಾತೇನು?

**ಸಯಿ**— ಅಂಬಾ ಭವಾನಿ ನಿಮ್ಮ ಮೂಲಕ ರಕ್ಷಿಸುವಳು.

**ಪಿಂಗಳೆ**— ಅಪ್ಪಣೆ ತಾಯಿ (ಎಂದು ನಮುಸ್ಕರಿಸಿ ಹೊರಡುವನು).

**ಸಯಿ**— ಇವರೆಲ್ಲ ದೇವರು ದೇವರು ಎನ್ನುತ್ತಾರೆ. ನನಗೆ ಅವರು ಇಲ್ಲದಿದ್ದರೆ ದೇವರಿದ್ದಂತೆ ತೋರುವುದಿಲ್ಲ. ಇವರೆಲ್ಲರ ದೇವರೂ ನನ್ನ ದೇವರನ್ನು ಕಾಪಾಡಲಿ (ಎಂದು ನಮುಸ್ಕಾರ ಮಾಡುವಳು).

---

# ಅಂಕ ೨

## ಸ್ಥಾನ ೧

ಆಗ್ರಾದಲ್ಲಿ ಶಿವಾಜಿಯ ಬಿಡಾರ. ಶಿವಾಜಿ.

**ಶಿವಾಜಿ**— ಯಾರಲ್ಲಿ?

**ಸೇವಕ**— (ಪ್ರವೇಶಿಸಿ) ಮಹಾಸ್ವಾಮಿ.

**ಶಿವಾಜಿ**— ಪಂತರು ಬಂದರೇ?

**ಸೇವಕ**— ಈಗತಾನೇ ಬಂದರು ಮಹಾಸ್ವಾಮಿ. ಇತ್ತಲೇ ಬರುತ್ತಿದಾರೆ.
ಸೇವಕನು ಹೊರಕ್ಕೆ ಹೋಗುತ್ತಾನೆ. ಸ್ವಲ್ಪದರಲ್ಲೇ ಪಿಂಗಳೆ ಪ್ರವೇಶಿಸಿ ಬಾಗಿಲ ಬಳಿ ನಿಲ್ಲುವನು. ಶಿವಾಜಿ ಅವನನ್ನು ನೋಡಿ

**ಶಿವಾಜಿ**— ದಯಮಾಡಿ ಪಂತರೆ, ರಾಜರು ಸಿಕ್ಕಿದರೋ?

**ಪಿಂಗಳೆ**— ಸಿಕ್ಕಿದ್ದರು, ಮಹಾಸ್ವಾಮಿ.

**ಶಿವಾಜಿ**— ಏನು ಹೇಳಿದರು?

**ಪಿಂಗಳೆ**— ಬಾದಷಹರಿಗೆ ಹೇಳುತ್ತಿದೇನೆ; ಅವರು ಏನೋ ಸ್ವಲ್ಪ ಆಗ್ರಹ ವಾಗಿದಾರೆ; ಇಷ್ಟರಲ್ಲೇ ಸರಿಹೋಗಬಹುದು; ಸ್ವಲ್ಪ ತಾಳ ಬೇಕು ಎಂದು ನಾನು ಕೇಳಿದೆ ಎನ್ನಿ ಎಂದರು. ಅವರು ಇಂದು ತಮ್ಮನ್ನು ಕಾಣುತ್ತಾರಂತೆ.

**ಶಿವಾಜಿ**— ಏನು ಇವರ ಆಗ್ರಹ, ಇವರ ಸಮಾಧಾನ. ಯಾರಿಗೆ ಬೇಕು? ಇಲ್ಲಿಗೆ ಬಂದು ತಿಂಗಳಮೇಲಾಯಿತು. ಬಂದ ಕೆಲಸದ ಮಾತೇ ಇಲ್ಲ. ವೃಥಾಕಾಲಹರಣವಾಯಿತು. ನಾಳೆ ಹಿಂದಕ್ಕೆ ಹೋಗೋಣ. ಏರ್ಪಾಡು ಮಾಡಿ.

**ಪಿಂಗಳೆ**— ಅಪ್ಪಣೆ. ಜಯಸಿಂಹ ಮಹಾರಾಜರು ಬಂದು ಮಾತನಾಡಿದ ಮೇಲೆ ಯಾವುದನ್ನೂ ನಿರ್ಧರಿಸಬಹುದಲ್ಲವೆ? ಹಿಂದಕ್ಕೆ ಹೋಗು ವುದಕ್ಕೆ ಆತುರ ತೋರಿಸಿದರೆ ಅದಕ್ಕೂ ಅಡ್ಡಿ ಮಾಡಬಹುದು.

**ಶಿವಾಜಿ**— ಹಾಗೂ ಆಗಬಹುದೇನು?

**ಪಿಂಗಳೆ**— ಆದರೂ ಆಶ್ಚರ್ಯವಿಲ್ಲ ಮಹಾಸ್ವಾಮಿ. ಅವರು ಹೇಳಿದ ರೀತಿಯಲ್ಲಿ ಏನೂ ತಿಳಿಯುವಂತಿಲ್ಲ.

ಶಿವಾಜಿ— ಏಕೆ ಹಾಗೆನ್ನುವಿರಿ?

ಪಿಂಗಳೆ— ಜಯಸಿಂಹ ಮಹಾರಾಜರು, ಬಾದಷಹರು ಕೋಪದಲ್ಲಿರುವಾಗ ನಾವು ಏನು ಮಾಡುತ್ತೇವೆಂದರೆ ಅದಕ್ಕೆಲ್ಲಾ ಅಡ್ಡಿ ಬರುತ್ತದೆ, ನಾಲ್ಕೈದು ದಿವಸ ಸ್ವಲ್ಪ ತಡೆದುಕೊಳ್ಳುವಂತೆ ರಾಜರಿಗೆ ತಿಳಿಸಿ ಎಂದರು.

ಶಿವಾಜಿ— ಚೆನ್ನಾಯಿತು. (ಎಂದು ಸ್ವಲ್ಪ ಸುಮ್ಮನಿದ್ದು) ಒಳ್ಳೆಯದು, ಪಂತರೆ ನಾಳೆ ಹಿಂದಕ್ಕೆ ಹೊರಡುವುದೆಂದು ಏರ್ಪಾಡುಮಾಡಿ. ಮಹಾ ರಾಜರು ಬಂದಮೇಲೆ ಇರುವುದೆಂದು ಏರ್ಪಾಡಾದರೆ ಇರುವು ದಕ್ಕೆ ಅಡ್ಡಿಯಿಲ್ಲ. ಹಾಗಿಲ್ಲದಿದ್ದರೆ ಹೊರಟೇಬಿಡೋಣ. ಹೋಗ ಕೂಡದೆಂದು ಅಡ್ಡಿಮಾಡಿದರೂ ಸಂತೋಷವೆ. ಹೇಗಾದರೂ ಈ ಕೆಲಸ ಇತ್ಯರ್ಥಕ್ಕೆ ಬರಲಿ.

ಪಿಂಗಳೆ— ಅಪ್ಪಣೆ.

ಸೇವಕನು ಬಾಗಿಲ ಬಳಿ ಬಂದು

ಸೇವಕ— ಮಹಾಸ್ವಾಮಿ, ಮುಸಲ್ಮಾನ ಮೌಲವಿಯೊಬ್ಬರು ಬಂದು ಭೇಟಿ ಅಪೇಕ್ಷಿಸುತ್ತಾರೆ.

ಶಿವಾಜಿ— ಎಲ್ಲಿದಾರೆ?

ಸೇವಕ— ಹೊರಬಾಗಿಲಲ್ಲಿ ನಿಲ್ಲಿಸಿ ಸಮಯ ತಿಳಿದು ಬರುತ್ತೇನೆಂದು ಬಂದೆ.

ಶಿವಾಜಿ— ಬರಹೇಳು.

ಪಿಂಗಳೆ— ಮಹಾಸ್ವಾಮಿ, ಮಹಾರಾಜರು ಒಂದು ಮಾತನ್ನು ಹಿಂದು ಮುಂದು ನೋಡಿ ಮೆಲ್ಲನೆ ಹೇಳಿದರು. ಅವರಿವರನ್ನು ರಾಜರ ಹತ್ತಿರ ಬಿಡಬೇಡಿ; ಅವರು ಮಾತನಾಡುವುದರಲ್ಲೂ ಬಹಳ ಎಚ್ಚರಿಕೆಯಿಂದಿರಬೇಕು; ಎಲ್ಲ ಬಾದಷಹರಲ್ಲಿ ಚಾಡಿ ಹೋಗುವ ಸಂಭವವುಂಟು; ಇದನ್ನು ತಿಳಿಸಿ ಎಂದರು.

ಶಿವಾಜಿ— ನ್ಯಾಯವಾದ ಮಾತು. ಯಾರಾದರೂ ಬಾಗಿಲಲ್ಲಿ ಇರಲಿ, ಪಂತರೆ. ಎಚ್ಚರಿಕೆಯಿಂದಲೇ ಇರಬೇಕು. ಆದರೂ ಯಾರನ್ನೂ ನೋಡುವು ದಿಲ್ಲವೆನ್ನುವುದಕ್ಕಾಗುತ್ತದೆಯೆ?

**ಸೇವಕನು ಮೌಲವಿಯೊಬ್ಬನನ್ನು ಕರೆದುಕೊಂಡು ಬರುವನು.**

ಸೇವಕ— ಬಂದರು ಮಹಾಸ್ವಾಮಿ.

ಮೌಲವಿ— ಸಲಾಂ, ಮಹಾರಾಜರಿಗೆ.

ಶಿವಾಜಿ— ದಯಮಾಡಿ ಮೌಲವಿಯವರೆ. ಕುಳಿತುಕೊಳ್ಳಿ (ಎಂದು ದೂರದಲ್ಲಿ ಒಂದು ರತ್ನಕಂಬಳಿಯನ್ನು ತೋರಿಸಿ ತಾನು ತನ್ನ ಪೀಠದ ಮೇಲೆ ಕುಳಿತು ಕೊಳ್ಳುವನು.)

ಮೌಲವಿ— ನಿನ್ನೇ ದಿನ ಹಿಂದೂ ಮುಸಲ್ಮಾನ್ ಸಾಧುಗಳಿಗೆ ಬಹಳ ದಾನ ಧರ್ಮ ಮಾಡಿದಿರೆಂದು ತಿಳಿಯಿತು. ನಾನು ಬರಲಿಕ್ಕೆ ಆಗಲಿಲ್ಲ. ಈಗ ಕೇಳೋಣ ಎಂತ ಬಂದೆ. ಇಲ್ಲೇ ದೇಪಲಿ ರಸ್ತೇಲಿ ನಮ್ಮ ಸಾಧುಗಳದೊಂದು ದರ್ಗ ಇದೆ. ನಾನು ಅಲ್ಲಿ ಪೀರ್ ಪೈಗಂಬರರ ಪೂಜೆ ಮಾಡಿಕೊಂಡು ದೇವರ ಧ್ಯಾನದಲ್ಲಿದ್ದೇನೆ. ತಾವು ಏನು ದಾನಮಾಡಿದರೆ ಅದನ್ನು ತೆಗೆದುಕೊಂಡು ಹೋಗಿ ತಮಗೆ ಒಳ್ಳೆಯದನ್ನು ಮಾಡುವಂತೆ ದೇವರಿಗೆ ಪ್ರಾರ್ಥನೆ ಮಾಡುತ್ತೇನೆ.

ಶಿವಾಜಿ— ಸಂತೋಷ. ಯಾರಲ್ಲಿ?

ಸೇವಕ— ಮಹಾಸ್ವಾಮಿ.

ಶಿವಾಜಿ— ನಿನ್ನೇ ಸಾಧುಗಳಿಗೆ ಕೊಟ್ಟ ಲವಾಜಮೇ ಒಂದು ತಟ್ಟೆ ಮೌಲವಿ ಯವರಿಗೆ ತಂದುಕೊಡಬೇಕು.

ಸೇವಕ— ಅಪ್ಪಣೆ (ಹೋಗುವನು).

ಮೌಲವಿ— ನಿಮ್ಮ ಔದಾರ್ಯವನ್ನು ಊರೆಲ್ಲಾ ಕೊಂಡಾಡುತ್ತಿದೆ. ಬಾದ ಷಹರೂ ಕೇಳಿ ಆನಂದಪಟ್ಟರಂತೆ.

ಶಿವಾಜಿ— ಸಂತೋಷ.

ಮೌಲವಿ— ಮುಸಲ್ಮಾನ ಸಾಧುಗಳನ್ನು ಹಿಂದೂಗಳಂತೆಯೇ ತಾವು ಕಾಣು ವುದು ನಮ್ಮಂತಹವರಿಗೆ ಬಹಳ ಸಂತೋಷ. ಹಿಂದೂಗಳು ಅನೇಕರು ಹೀಗೆ ಮಾಡುವುದಿಲ್ಲ.

ಶಿವಾಜಿ— ಮುಸಲ್ಮಾನರೂ ಹಿಂದೂಗಳನ್ನು ತಮ್ಮಂತೆ ಕಾಣುವುದಿಲ್ಲ.

ಮೌಲವಿ— ಅದೂ ಇಲ್ಲ ಅನ್ನಿ. ಈ ಜಜಿಯಾ ನೋಡಿ. ಬಾದಷಹರು ತಿಳಿದವರು. ಆದರೆ ಅದನ್ನು ಹಾಕಿ ಹಿಂದೂ ಜನಕ್ಕೆಲ್ಲ ಬಹಳ ಅವಮಾನ ಮಾಡಿದಾರೆ.

ಶಿವಾಜಿ— ಸರಿ.

ಮೌಲವಿ— ಜಜಿಯಾ ಹಾಕಿರುವುದು ತಪ್ಪು ಎಂದು ತಮಗೆ ಕಾಣುವುದಿಲ್ಲವೆ?

ಶಿವಾಜಿ— ಮೌಲವಿ ಸಾಹೇಬರೆ, ನೀವು ಈಗ ಮಾತ್ರ ಮೌಲವಿಗಳಾಗಿದೀರಿ ಎಂತ ಕಾಣುತ್ತದೆ. ಮೌಲವೀತನವನ್ನು ಮರೆಯಬೇಡಿ. ಕಟ್ಟಳೆಗಾಗಿ ಬಂದಿದೀರಿ. ಅದನ್ನು ಕೊಡುತ್ತೇವೆ. ತೆಗೆದುಕೊಂಡು ಹೋಗಿ. ಆಮೇಲೆ ನಿಮ್ಮ ನಿಜವಾದ ವೇಷದಲ್ಲಿ ಬನ್ನಿ. ಜಜಿಯಾ ವಿಷಯ ಚರ್ಚೆ ಮಾಡಬಹುದು. ಯಾರಯ್ಯಾ ಅಲ್ಲಿ, ಕಟ್ಟಳೆ ತರಲಿಲ್ಲ.

ಪಿಂಗಳೆ— (ಪ್ರವೇಶಿಸಿ ಶಿವಾಜಿಗೆ) ಮಹಾಸ್ವಾಮಿ, ಈತನು ಯಾವ ಮೌಲವಿಯೂ ಅಲ್ಲವೆಂದು ಕಾಣುತ್ತದೆ. ಈತನ ಹಿಂದೆ ಬಂದ ಒಬ್ಬ ಭಿಕ್ಷುಕನನ್ನು ನಮ್ಮವರು ಹಿಡಿದಿದಾರೆ; ಅವನಲ್ಲಿ ಕಠಾರಿ ಇದೆ. ಇವನು ಯಾರೋ ವೇಷ ಹಾಕಿಕೊಂಡು ಬಂದಿದಾನೆಂದು ಕಾಣುತ್ತದೆ.

ಇಷ್ಟು ಹೊತ್ತಿಗೆ ಸೇವಕನು ತಟ್ಟೆಯಲ್ಲಿ ಲವಾಜಮ ತರುತ್ತಾನೆ.

ಶಿವಾಜಿ— ತೊಂದರೆ ಇಲ್ಲ. ದೇವರ ಸೇವಕರ ವೇಷ ಹಾಕಿದವರೂ ನಮಗೆ ಪೂಜ್ಯರೆ. ಅವರಿಗೆ ಆ ಕಟ್ಟಳೆ ಕೊಡಿ.

ಸೇವಕನು ಮೌಲವಿಗೆ ತಟ್ಟೆಯನ್ನು ಕೊಡುವನು.

ಮೌಲವಿ— ನಾನು ಬರುತ್ತೇನೆ. ನಾನು ಕಠಾರಿ ಇಟ್ಟುಕೊಂಡಿರುವುದರಿಂದ ನನ್ನನ್ನು ಯಾರೋ ಎಂದು ಭಾವಿಸಬೇಡಿ. ಕಾಲ ಕೆಟ್ಟದು. ಆದ್ದರಿಂದ ಸಾಮಾನ್ಯವಾಗಿ ನಾವೆಲ್ಲ ಯಾವಾಗಲೂ ಒಂದು ಆಯುಧ ಧರಿಸಿಕೊಂಡೇ ತಿರುಗುತ್ತೇವೆ. ನಿಮಗೆ ಒಳ್ಳೆಯದಾಗಲಿ. ನಾನು ಬರುತ್ತೇನೆ (ಎಂದು ಎದ್ದು ಹೊರಡುವನು).

ಪಿಂಗಳೆ— (ಶಿವಾಜಿಗೆ) ಬಿಡುವ ಮೊದಲು ಇವನು ಯಾರೆಂದು ಗೊತ್ತು ಮಾಡಿಕೊಳ್ಳಲೆ?

ಶಿವಾಜಿ— ಬೇಡಿ. ವೇಷವೆಂದು ತಿಳಿದದ್ದೇ ಸಾಕು. ಯಾರೆಂಬುದು ತಾನೇ ಗೊತ್ತಾಗುತ್ತದೆ. ಹೋಗಲು ಬಿಡಿ. (ಈ ವೇಳೆಗೆ ಮೌಲವಿ ಹೊರಟುಹೋಗುವನು) ಪೂಜೆಗೆ ಎಲ್ಲಾ ಸಿದ್ಧವಾಗಿದೆಯೆ?

ಪಿಂಗಳೆ— ಆಗಿದೆ ಮಹಾಸ್ವಾಮಿ.

ಸೇವಕನು ಪ್ರವೇಶಿಸಿ

ಸೇವಕ— ಮಹಾಸ್ವಾಮಿ, ಜಯಸಿಂಹ ಮಹಾರಾಜರು ದಯಮಾಡಿಸಿದ್ದಾರೆ.

ಶಿವಾಜಿ— ಮೋರೋಪಂತರೆ, ನಾನು ಪೂಜೆ ಮುಗಿಸಿಕೊಂಡು ಆಮೇಲೆ ಅವರ ಸಂಗಡ ಮಾತನಾಡುತ್ತೇನೆ. ಅದುವರೆಗೆ ಅವರನ್ನು ಕೂರಿಸಿಕೊಂಡಿರಿ. ಕಾಯುವುದಕ್ಕಾಗುವುದಿಲ್ಲವೆಂದರೆ ನಾಳೆ ನೋಡುವೆನೆಂದು ಹೇಳಿ.

ಪಿಂಗಳೆ— ಅಪ್ಪಣೆ (ಶಿವಾಜಿ ಒಳಗೆ ಹೋಗುವನು). ದಯಮಾಡಹೇಳು (ಎಂದು ಸೇವಕನಿಗೆ ಹೇಳುವನು. ಸ್ವಲ್ಪದರಲ್ಲೇ ಜಯಸಿಂಹನು ಬರುವನು.) ಮಹಾರಾಜರಿಗೆ ನಮಸ್ಕಾರ.

ಜಯಸಿಂಹ—ನಮಸ್ಕಾರ. ಎಲ್ಲಿ ನಿಮ್ಮ ರಾಜರು?

ಪಿಂಗಳೆ— ಪೂಜೆಗಾಗಿ ಒಳಗೆ ಹೋದರು. ಸ್ವಲ್ಪ ಕುಳಿತಿರುವುದಾದರೆ ಬರುತ್ತಾರೆ.

ಜಯಸಿಂಹ—ನಾನು ಬಂದದ್ದು ತಿಳಿದೂ ಒಳಗೆ ಹೋದರೆ?

ಪಿಂಗಳೆ— ಪೂಜೆಯ ಹೊತ್ತು.

ಜಯಸಿಂಹ—ಇದೇನು ಪಂತರೆ, ನಾನು ಇವರ ಕೆಲಸಕ್ಕಾಗಿ ಬಂದರೆ ಏನು ಎಂದು ವಿಚಾರಿಸಿ ಒಳಗೆ ಹೋಗಬಾರದಿತ್ತೆ?

ಪಿಂಗಳೆ— ತಾವು ಹಿರಿಯರು. ತಮಗೆ ಹೇಳಬೇಕಾಗಿಲ್ಲ. ಒಂದು ತಿಂಗಳಿಂದ ತಾವು ಇಂದು ಬರುತ್ತೀರಿ, ನಾಳೆ ಬರುತ್ತೀರಿ ಎಂದು ಕಾದರು. ತಾವು ಎರಡು ನಿಮಿಷ ಕಾಯಬೇಕು. ನಮ್ಮ ರಾಜರು ಸಮಾಧಾನವಾಗಿ ಮಾತನಾಡಬೇಕಾದಾಗಲೆಲ್ಲ ಸ್ವಲ್ಪ ಹೊತ್ತು ದೇವರನ್ನು ನೆನೆದು ಮಾತನಾಡುತ್ತಾರೆ. ಅದಕ್ಕಾಗಿಯೇ ಒಳಗೆ ಹೋಗಿದ್ದಾರೆ.

ಜಯಸಿಂಹ—ನನ್ನೊಂದಿಗೆ ಸಮಾಧಾನವಾಗಿ ಮಾತನಾಡುವುದಕ್ಕೆ ಅಷ್ಟು ಪ್ರಯತ್ನವೆ?

ಪಿಂಗಳೆ— ಅವರನ್ನು ಇಲ್ಲಿಗೆ ಕರೆಯಿಸಿಕೊಂಡವರು ಅವರೊಂದಿಗೆ ಸರಿಯಾಗಿ ನಡೆದುಕೊಳ್ಳಲಿಲ್ಲವೆಂದು ಅವರ ಮನಸ್ಸಿಗೆ ನೋವಾಗಿದೆ. ತಮ್ಮ ಮಾತಿನ ಭರವಸೆಯ ಮೇಲೆ ಬಂದರು. ಇಲ್ಲಿ ವೃಥಾ ಕಾಲಹರಣವಾಯಿತು. ಆದರಿಂದ ಅಸಮಾಧಾನ. ಮಧ್ಯೆ ವೇಷಗಳು, ಮೋಸಗಳು ಬೇರೆ. ತಾವು ಈಗ ದಯಮಾಡು ವುದಕ್ಕೆ ಕೊಂಚ ಮೊದಲು ಯಾರೋ ಮುಸಲ್ಮಾನರವನು ಮೌಲವಿ ವೇಷದಿಂದ ಬಂದಿದ್ದ.

ಜಯಸಿಂಹ—(ಸ್ವಲ್ಪ ಭಯವನ್ನು ಸೂಚಿಸಿ) ಮೌಲವಿಯೆ?

ಪಿಂಗಳೆ— ಹೌದು.

ಜಯಸಿಂಹ—ಉದ್ದನೇ ತೆಳ್ಳನೇ ಮನುಷ್ಯ.

ಪಿಂಗಳೆ— ಹೌದು; ಮೇಲಿನ ತುಟಿ ಸ್ವಲ್ಪ ಒಳಕ್ಕೆ, ಕೆಳತುಟಿ ಸ್ವಲ್ಪ ಹೊರಕ್ಕೆ ಇತ್ತು.

ಜಯಸಿಂಹ—ಸರಿ. ಕಣ್ಣುಗಳು ತೀವ್ರವಾಗಿ ಚುಚ್ಚುವಂತಿದ್ದುವೋ?

ಪಿಂಗಳೆ— ಹೌದು. ಆತ ಯಾರು? ಯಾರೋ ವೇಷದಿಂದ ಬಂದಿದ್ದಾನೆ ಎಂದು ತಿಳಿಯಿತು. ನಾನು ಅವನನ್ನು ಹಿಡಿದುಕೊಳ್ಳೋಣ ವೆಂದೆ. ನಮ್ಮ ರಾಜರು ಬೇಡವೆಂದರು. ಅವರದು ಯಾವಾಗಲೂ ಹಾಗೆಯೇ. ಬಹಳ ದೊಡ್ಡ ರೀತಿ. ಇಂಥ ಅಯೋಗ್ಯ ಸ್ಥಳಗಳಿಗೆ ಸರಿಹೋಗುವುದಿಲ್ಲ. ಮೋಸ, ವೇಷ ಎಂದರೆ ಅವರಿಗೆ ಬಹಳ ಕೋಪ ಬರುತ್ತದೆ.

ಜಯಸಿಂಹ—ಪ್ರಪಂಚ ನೋಡಿ, ಪಿಂಗಳೆಯವರೆ! ಇಂಥಾ ಒಳ್ಳೆಯವರು ಎನ್ನುವ ನಿಮ್ಮ ರಾಜರನ್ನು ಇವರೇ ಮೋಸಗಾರರು ಎನ್ನುತ್ತದೆ. ಷಯಿಸ್ತಾ ಖಾನನ ಕತೆ, ಅಫಜಲ್ ಖಾನನ ಕತೆ ಹೇಳುವರೆಲ್ಲಾ ಶಿವಾಜಿ ಮಹಾರಾಜರು ಮೋಸಮಾಡಿದರು ಎನ್ನುತ್ತಾರೆ. ಸದ್ಯ ನೀವು ಮೌಲವಿಯನ್ನು ಏನೂ ಮಾಡಲಿಲ್ಲವಲ್ಲ.

ಪಿಂಗಳೆ— ನಾವು ಅವನನ್ನು ಏನೂ ಮಾಡಲಿಲ್ಲ. ಆತ ಯಾರು? ನಮಗೆ ಹೇಳಬಹುದೆ?

ಜಯಸಿಂಹ—ನಾನು ಅವನನ್ನ ನೋಡಲಿಲ್ಲವಲ್ಲ. ಇಂಥವನೇ ಎಂದು ಹೇಗೆ ಹೇಳಲಿ. ಆದರೆ ಅವನು ಯಾರಿರಬಹುದೆಂದು ಸ್ವಲ್ಪ ಊಹಿಸಬಲ್ಲೆ. ಅದೇ ಮನುಷ್ಯನಾಗಿದ್ದ ಪಕ್ಷ ನೀವು ಆತನ ತಂಟೆಗೆ ಹೋಗದ್ದೇ ಒಳ್ಳೆಯದಾಯಿತು. ಅವನು ಬಾದಷಹರ ಕಡೆ ಮನುಷ್ಯ. ಅವರಿಗಿವರಿಗೆ ಏನು ಮಾತು ನಡೆಯಿತು?

ಪಿಂಗಳೆ— ಅದೇನು ಮಾತು ನಡೆಯಿತೋ, ನಾನು ಆಗ ಅಲ್ಲಿರಲಿಲ್ಲ.

ಸೇವಕನು ಪ್ರವೇಶಿಸಿ

ಸೇವಕ— ರಾಜಾ ಜಯಸಿಂಹರ ಕಡೆಯವರು ಬಂದಿದಾರೆ. ಬಾದಷಹರ ಒಂದು ಪತ್ರ ತಂದಿದಾರಂತೆ. ಒಡನೆ ತಲಪಿಸಬೇಕು ಎಂತ ಅಪ್ಪಣೆಯಾಗಿದೆಯಂತೆ.

ಜಯಸಿಂಹ—ಬರಹೇಳು.

ಸೇವಕ— ಅಪ್ಪಣೆ (ಎಂದು ಹೋಗುವನು).

ಜಯಸಿಂಹನ ಸೇವಕನು ಮನೆಯ ಸೇವಕನೊಂದಿಗೆ ಬರುವನು. ಒಂದು ಪತ್ರವನ್ನು ಮಹಾರಾಜರಿಗೆ ಕೊಡುವನು.

ಜಯಸಿಂಹ—ಒಳ್ಳೆಯದು, ನೀನು ಹೊರಡು. (ಎಂದು ಪತ್ರವನ್ನು ತೆಗೆದು ನೋಡಿ ಕಿಸೆಯಲ್ಲಿಟ್ಟುಕೊಳ್ಳುವನು.)

ಶಿವಾಜಿ ಬರುವನು. ಪಿಂಗಳೆ ಹೊರಗೆ ಹೋಗುವನು.

ಶಿವಾಜಿ— ನಮಸ್ಕಾರ, ಮಹಾರಾಜರಿಗೆ. ಕಾಯಿಸಿದೆ, ಕ್ಷಮಿಸಬೇಕು.

ಜಯಸಿಂಹ—ನನ್ನಿಂದ ನಿಮ್ಮ ಪೂಜೆಗೆ ತೊಂದರೆಯಾಯಿತು.

ಶಿವಾಜಿ— ಇಲ್ಲ, ಇಲ್ಲ. ಪೂಜೆ ಯಾವಾಗಲಾದರೂ ಆಗುತ್ತದೆ. ಆದರೆ ಹಿರಿಯರು ದಯಮಾಡಿಸುವುದು ದೊಡ್ಡದು.

ಜಯಸಿಂಹ—ತಿಂಗಳಿಂದಲೂ ನಾಳೆ ಹೋಗೋಣ, ನಾಡಿದ್ದು ಹೋಗೋಣ ಎನ್ನುತ್ತಾ ಕೊನೆಗೆ ಇಂದಿನವರೆಗೆ ಬರುವುದಕ್ಕಾಗಲಿಲ್ಲ. ಕೆಲಸವಾಗಿತ್ತು. ಅಲ್ಲದೆ ತಮ್ಮನ್ನು ಇಲ್ಲಿಗೆ ಕರೆದುಕೊಂಡು ಬಂದ ಕೆಲಸಕ್ಕೆ ಬಹಳ ವಿಘ್ನಗಳು ಒದಗಿದುವು. ಹೇಗಾದರೂ ತೀರಿಸಿಕೊಂಡು ಆಮೇಲೆ ಬರೋಣ; ಮೊದಲೇ ಬಂದರೆ ಏನೂ ಗೊತ್ತಾಗಿ ಹೇಳಿದಂತೆ ಆಗುವುದಿಲ್ಲವಲ್ಲ ಎಂತ ಬರಲಿಲ್ಲ.

ಶಿವಾಜಿ— ನನಗಾಗಿ ಬಹಳ ತೊಂದರೆ ತೆಗೆದುಕೊಂಡಿರಿ. ಈ ಮಾತನ್ನಾದರೂ ನನಗೆ ಹೇಳಿಕಳುಹಿಸಿದ್ದರೆ ಚೆನ್ನಾಗಿತ್ತು.

ಜಯಸಿಂಹ—ನಾನೂ ಬಾದಷಹರೂ ವಿಚಾರಮಾಡುತ್ತಿರುವಾಗ ಮಧ್ಯೆ ಇತರರಿಗೆ ಏನನ್ನು ಹೇಳುವುದಕ್ಕಾಗುತ್ತೆ, ಮಹಾರಾಜ್.

ಶಿವಾಜಿ— ನೀವೂ ಬಾದಷಹರೂ ಮಾಡುವ ಚರ್ಚೆಯನ್ನು ನನಗೆ ಹೇಳಬೇಕಾದದ್ದಿಲ್ಲ, ಮಹಾರಾಜರೆ. ನಾನು ಬಂದ ಕೆಲಸದ ವಿಚಾರ ಚರ್ಚೆಯಲ್ಲಿದೆ, ಇತ್ಯರ್ಥವಾಗುತ್ತದೆ ಎಂತ ಹೇಳಿದ್ದರೆ ಸಾಕಾಗಿತ್ತು.

ಜಯಸಿಂಹ—ನನ್ನ ಮಾತನ್ನು ತಪ್ಪಾಗಿ ತಿಳಿಯಬೇಡಿ. ಒಂದೆರಡು ವಿಷಯ ನಾವು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು. ಈಗ ನೋಡಿ, ಈಗಾಗಲೆ ತಾವು ರಾಜರಂತೆ ಬಾದಷಹರಿಗೆ ಅಥವಾ ನಮಗೆ ಸಮಾನರು ಎಂಬಂತೆ ನಡೆದುಕೊಳ್ಳುತ್ತೀರಿ. ಅದನ್ನು ಬಾದಷಹರು ಒಪ್ಪುವುದಿಲ್ಲ.

ಶಿವಾಜಿ— ನನ್ನನ್ನು ರಾಜನಾಗಿ ಒಪ್ಪುವ ಸಂಭವವಿದೆ, ದಖನಿನಲ್ಲಿ ಬಾದಷಹರ ಪ್ರತಿನಿಧಿಯಾಗಿರಬೇಕೆಂದು ನಿಯಮಿಸಿದರೂ ನಿಯಮಿಸಬಹುದು, ಎಂದಲ್ಲವೆ ನನ್ನನ್ನು ನೀವು ಇಲ್ಲಿಗೆ ಕರೆ ತಂದದ್ದು.

ಜಯಸಿಂಹ—ಅದು ಈಗಲೂ ಆಗಬಹುದು. ವಿಷಯ ಯೋಚನೆಯಲ್ಲಿದೆ.

ಶಿವಾಜಿ— ನೀವು ರಾಯಗಡದಲ್ಲಿ ಹೇಳಿದ ಮಾತು ಇದಲ್ಲ, ಯೋಚನೆ ಮಾಡುತ್ತಾರೆ ಎಂದು ಹೇಳಿದ್ದರೆ ನಾನು ಇಲ್ಲಿಗೆ ಬರಬೇಕಾದದ್ದು ಏನಿತ್ತು?

ಜಯಸಿಂಹ—ರಾಜರೆಂದೂ ಪ್ರತಿನಿಧಿಯೆಂದೂ ಒಪ್ಪಿಕೊಳ್ಳುವುದಕ್ಕಾದರೂ ತಮ್ಮನ್ನು ಇಲ್ಲಿಗೆ ಕರೆಯಿಸಬೇಕಾಗಿರಲಿಲ್ಲವಷ್ಟೆ? ತಾವು ಅಲ್ಲಿದ್ದಾಗಲೇ ಒಪ್ಪಿಕೊಂಡು ನಿಮ್ಮೊಂದಿಗೆ ಕೌಲುಮಾಡಿಕೊಂಡು ನಿಮ್ಮನ್ನು ಬಾದಷಹರ ಪ್ರತಿನಿಧಿ ಎಂದು ಹೇಳಬಹುದಾಗಿತ್ತಲ್ಲವೆ.

ಶಿವಾಜಿ— ಮಹಾರಾಜರೆ, ನನ್ನೊಂದಿಗೆ ಬಾದಷಹರೂ ಬಾದಷಹರ ಕಡೆಯವರೂ ಈ ಮೊದಲೇ ಕೌಲು ಮಾಡಿಕೊಂಡದ್ದುಂಟು. ತಾವು

ಅದನ್ನು ಬಲ್ಲಿರಿ. ಆದರೆ ಆಗ ನಾನು ಆಗ್ರಾದಲ್ಲಿ ಇವರ ಕೈಯಲ್ಲಿ ಸಿಕ್ಕಿರಲಿಲ್ಲ.

ಜಯಸಿಂಹ—ಶಿವಾಜಿ ಮಹಾರಾಜ್, ತಾವು ಕೋಪಮಾಡಬೇಡಿ. ಸ್ವಲ್ಪ ತಾಳ್ಮೆಯಿಂದಿರಿ. ನಾನು ಎಲ್ಲವನ್ನೂ ಸರಿಪಡಿಸುತ್ತೇನೆ.

ಶಿವಾಜಿ— ಮಹಾರಾಜರೆ, ನಾನು ತಾಳ್ಮೆಯಿಂದಲ್ಲದೆ ಬೇರೆ ಏನೂ ಮಾಡ ಲಿಲ್ಲ. ಅಲ್ಲಿ ಹೇಳಿದ ಮಾತಿಗೂ ಇಲ್ಲಿ ಹೇಳಿದ ಮಾತಿಗೂ ಸಂಬಂಧ ವಿಲ್ಲವೆಂದು ಹೇಳುತ್ತಿದ್ದೇನೆ ಅಷ್ಟೆ.

ಜಯಸಿಂಹ—ಎಲ್ಲ ಸರಿಹೋಗುತ್ತದೆ. ಸ್ವಲ್ಪ ತಡೆಯಿರಿ. ಈ ದಿನ ಬೆಳಗಾಗ ದರ್ಬಾರ್ ಆದಮೇಲೆ ನಾನು ಕೇಳಿದಾಗ ತಮ್ಮನ್ನು ನಾಳೆ ಅಥವಾ ನಾಡಿದ್ದಿನ ದರ್ಬಾರಿಗೆ ಕರೆಯಿಸೋಣವೆಂದು ಹೇಳಿದರು. ನನ್ನನ್ನು ಒಡನೆಯೇ ಬರಹೇಳಿ ಈಗ ಒಂದು ಪತ್ರ ಬರೆದಿದ್ದಾರೆ. ಹೋಗಿ ನೋಡುತ್ತೇನೆ. ಈ ವಿಷಯ ಪುನಃ ಪ್ರಸ್ತಾಪ ಮಾಡುತ್ತೇನೆ.

ಶಿವಾಜಿ— ಸಂತೋಷ ಮಹಾರಾಜರೆ. ಆ ವಿಚಾರವೆಲ್ಲ ತಮಗೆ ಸೂಕ್ತ ತೋರಿದಂತೆ ಮಾಡಬಹುದು. ನಾಳೆ ಈ ವಿಷಯ ಇತ್ಯರ್ಥ ವಾಗದೆ ಇದ್ದರೆ ನಾನು ಊರಿಗೆ ಪ್ರಯಾಣಮಾಡುತ್ತೇನೆ.

ಜಯಸಿಂಹ—ಅಲ್ಲಿಯವರೆಗೆ ಬರಲಾರದು. ನಾನು ಪುನಃ ತಮಗೆ ಹೇಳಿ ಕಳುಹಿಸುತ್ತೇನೆ. ನಿಮ್ಮನ್ನು ಒಂದು ಮಾತು ಕೇಳಬೇಕೆಂದಿದ್ದೆ. ಕಲ್ಯಾಣವನ್ನು ಹಿಡಿಯುವುದಕ್ಕೆ ಸಹಾಯ ಮಾಡಿದನಂತಲ್ಲ, ಆ ಕಾಸೀಂ ಖಾನ್ ಯಾರು? ಅವನ ಸಮಾಚಾರವೇನು?

ಶಿವಾಜಿ— ಅವನೇ, ಯಾಕೆ?

ಜಯಸಿಂಹ—ಯಾರೋ ಅವನ ವಿಷಯ ಬಾದಷಹರಿಗೆ ಹೇಳಿದರೆಂತ ಕಾಣು ತ್ತದೆ. ಕೇಳಿದರು.

ಶಿವಾಜಿ— ಎಲ್ಲ ಸಂಪೂರ್ಣವಾಗಿ ಹೇಳುತ್ತೇನೆ. ಅವನು ಕಲ್ಯಾಣದ.... (ಎನ್ನುತ್ತ ಇಬ್ಬರೂ ಹೋಗುವರು.)

---

## ಸ್ಥಾನ ೨

ಬಾದಷಹನ ಬೈಟಕ್ ಖಾನೆ. ಬಾದಷಹ, ರೋಷನಾರ ಕುಳಿತಿದಾರೆ.
ಬಳಿಯಲ್ಲಿ ಕಾಸೀಂ. ಜಯಸಿಂಹನು ಪ್ರವೇಶಿಸುವನು.

ಜಯಸಿಂಹ—(ನಮಸ್ಕಾರ ಮಾಡಿ ಹತ್ತಿರಕ್ಕೆ ಬಂದು) ನಾನು ರಾಜಾ ಶಿವಾಜಿಯವರ ಬಳಿ ಹೋಗಿದ್ದೆ. ತಮ್ಮ ಅಪ್ಪಣೆ ಅಲ್ಲಿಗೆ ಬಂತು. ಅದರಿಂದ ಬರುವುದು ತಾವಕಾಶವಾಯಿತು.

ಬಾದಷಹ—ತಿಳಿಯಿತು. ಏನಾಗಿದೆ ಹೆಗ್ಗಣ (ಕಾಸೀಂ ಸ್ವಲ್ಪ ನಗುತ್ತಾನೆ).

ಜಯಸಿಂಹ—ಆತನನ್ನು ಹೆಗ್ಗಣವೆಂದು ತಿರಸ್ಕಾರಮಾಡುವಂತಿಲ್ಲ. ನಾನು ತಮ್ಮ ಪರವಾಗಿ ಆತನಿಗೆ ಹೇಳಿದ ಮಾತನ್ನು ನಡೆಯಿಸಿದರೆ ಎಲ್ಲ ವಿಧದಲ್ಲಿಯೂ ಒಳ್ಳೆಯದು.

ಬಾದಷಹ—ಏಕೆ? ಬೋನಿನಲ್ಲಿ ಬಿದ್ದಮೇಲೆ ಸಿಂಹದಂತೆ ಆಡುತ್ತಿದ್ದಾನೆಯೋ?

ಜಯಸಿಂಹ—ಆತ ಬಹುಳ ಶಕ್ತ, ಜಹಾಪನಾ. ಅವನನ್ನು ನಿಮ್ಮವನನ್ನಾಗಿ ಮಾಡಿಕೊಳ್ಳಿ. ಯಾರಿಗಿಂತಲೂ ಚೆನ್ನಾಗಿ ಅವನು ದಖನಿನಲ್ಲಿ ನಿಮ್ಮ ರಾಜ್ಯವನ್ನು ನಡೆಯಿಸುತ್ತಾನೆ.

ಬಾದಷಹ—ನಮ್ಮ ರಾಜ್ಯ ನಡೆಯಿಸುತ್ತಾನೋ, ತನ್ನ ರಾಜ್ಯ ನಡೆಯಿಸುತ್ತಾನೋ? ಇವರನ್ನು ಕೇಳಿ. ಇವರೇ ಕಾಸೀಂ ಖಾನ್. ಕಲ್ಯಾಣದವರು ಎಂತ ನಾನು ಹೇಳಿದೆನಲ್ಲಾ ಅವರು. ಕಾಸೀಂ ಖಾನ್ ಹೇಳುವುದನ್ನೆಲ್ಲಾ ನೀವು ಕೇಳಬೇಕು. ದಖನು ತನ್ನದೆಂತ ಕೂತರೂ ಕೂತ ಶಿವಾಜಿ.

ಜಯಸಿಂಹ—ಅವನಿಗೆ ತೊಂದರೆ ಕೊಟ್ಟರೆ ಅದನ್ನು ತಪ್ಪಿಸುವುದಕ್ಕಾಗುತ್ತದೆಯೇ? ಅವನಿಗೆ ಮರ್ಯಾದೆ ತೋರಿಸಿದರೆ ಅವನು ಕೃತಜ್ಞತೆಯಿಂದ ನಮ್ಮ ಪರವಾಗಿ ನಡೆದುಕೊಳ್ಳುತ್ತಾನೆ. ತೊಂದರೆ ಕೊಟ್ಟರೆ ಹಗೆಯಾಗುತ್ತಾನೆ.

ಬಾದಷಹ—ಹಗೆಯಾಗಿ ಬೋನಿನಲ್ಲಿರುತ್ತಾನೆ.

ಜಯಸಿಂಹ—ಎಂದೆಂದಿಗೂ ಬೋನಿನಲ್ಲಿರುತ್ತಾನೆಯೆ?

ಬಾದಷಹ—ಜಂಭ ಕಡಿಮೆಯಾಗುವವರೆಗೂ ಇರುತ್ತಾನೆ. ಆಮೇಲೆ ಬೇಡಿ ಕೊಳ್ಳುತ್ತಾನೆ. ಆಗ ಜೋಕೆ ಹೇಳಿ ಹಿಂದಕ್ಕೆ ಕಳುಹಿಸುವುದು. ಮೊಗಲ್ ಬಾದಷಾಹಿಗೆ ಎಷ್ಟು ಶಕ್ತಿಯಿದೆ ಎನ್ನುವುದು ಅವನಿಗೆ ತಿಳಿಯಲಿ.

ಜಯಸಿಂಹ—ಮೊಗಲ್ ಬಾದಷಾಹಿಗೆ ಎಷ್ಟು ಶಕ್ತಿಯಿದೆ ಎಂತ ಮಕ್ಕಳೂ ಬಲ್ಲರು ಜಹಾಪನಾ. ಆತನು ಕಾಣನೆ? ಒಂದು ಮಾತು ಹೇಳಿ ಕರೆಯಿಸಿ ಈಗ ಬೇರೆ ಮಾತು ಹೇಳಿ ಮೋಸಮಾಡುತ್ತಿದಾರೆಂದು ಆವನು ತಿಳಿದುಕೊಂಡಿದಾನೆ.

ರೋಷನಾರ—ಹೌದು, ನಿಮ್ಮನ್ನು ಕಳುಹಿಸಿದಾಗ ಈ ಕಲ್ಯಾಣದ ಮಾತು ತಿಳಿದಿರಲಿಲ್ಲವಲ್ಲ.

ಜಯಸಿಂಹ—ಆತನಲ್ಲಿ ಆ ಮಾತನ್ನು ವಿಚಾರಿಸಿದೆ, ಬೇಗಂ ಸಾಹೇಬಾ.

ಕಾಸೀಂ— ನಾನು ಇಲ್ಲಿ ಇದೇನೆಂಬುದನ್ನು ಅವರಿಗೆ ತಿಳಿಸಿಬಿಟ್ಟಿರಾ?

ಜಯಸಿಂಹ—(ಅವನ ಮಾತಿಗೆ ಉತ್ತರಕೊಡದೆ) ಅವರು ಹೇಳುವ ಮಾತು ಬೇರೆ. ಖಾನರು ಹೇಳುತ್ತಾರೆಂದು ತಾವು ಅಪ್ಪಣೆ ಕೊಡುವ ಮಾತು ಬೇರೆ. ಬೇಕಾದರೆ ಅದನ್ನೂ ಹೇಳುತ್ತೇನೆ. ಆದರೆ ಈ ಮಾತಿಗೂ ಅವರನ್ನು ಕರೆಯಿಸಿದ ವಿಷಯಕ್ಕೂ ಸಂಬಂಧವಿಲ್ಲವೆಂದು ನನಗೆ ತೋರುತ್ತದೆ.

ರೋಷನಾರ—ಖಾನರು ಇಲ್ಲಿರುವ ಮಾತು ಅವರಿಗೆ ಹೇಳಿದಿರಾ?

ಜಯಸಿಂಹ—ಇಲ್ಲ.

ಬಾದಷಹ—ನಾಳೆ ನಾಡಿದ್ದು ದರ್ಬಾರಿಗೆ ಬರಲಿ ಎಂತ ಹೇಳಿದ್ದೆನಲ್ಲಾ. ಈ ದಿನ ನಾನು ಅವನ ಬಿಡಾರಕ್ಕೆ ಹೋಗಿದ್ದೆ.

ಜಯಸಿಂಹ—(ಆಶ್ಚರ್ಯವನ್ನು ತೋರಿಸದೆ) ಸರಿ.

ಬಾದಷಹ—ನಿಮಗೆ ಇದು ತಿಳಿದಿತ್ತೇನು?

ಜಯಸಿಂಹ—ಈಗ ನಾನು ಅಲ್ಲಿಂದಲೇ ಬರುತ್ತಿದೇನಲ್ಲ.

ಬಾದಷಹ—ಬಂದಿದ್ದವನು ನಾನು ಎಂದು ಅವರಿಗೆ ತಿಳಿದಿತ್ತೇ? ಇಲ್ಲ.

ಜಯಸಿಂಹ—ಇಲ್ಲ. ಮೌಲವಿ ಯಾರೋ ಬಂದಿದ್ದನೆಂದು ಹೇಳಿದರು. ವರ್ಣನೆಯಿಂದ ತಾವು ಇರಬಹುದೆಂದು ನಾನೇ ಊಹಿಸಿದೆ.

ಬಾದಷಹ—ಅವರಿಗೆ ಹೇಳಿದಿರಾ?

ಜಯಸಿಂಹ—ಯಾಕೆ ಹೀಗೆ ಅಪ್ಪಣೆ ಆಗುತ್ತೆ? ಈ ವಿಷಯದಲ್ಲೆಲ್ಲಾ ನಾನು ತಮ್ಮವನಾಗಿ ನಡೆದುಕೊಳ್ಳುತ್ತಿದೇನೆಂದು ನಾನು ಪುನಃ ವಿಜ್ಞಾಪನೆ ಮಾಡಬೇಕೆ? ನಾನೇ ಊಹಿಸಿದೆ. ಸುಮ್ಮನಿದ್ದೆ. ಇಷ್ಟಕ್ಕೆ ನಾನು ಅವರಿಗೆ ಹೇಳಬೇಕಾದದ್ದೇನು? ಅವರಿಗೆ ಇಂದಲ್ಲ ನಾಳೆ ತಾನೇ ತಿಳಿಯುತ್ತದೆ. ಇನ್ನೊಂದುಸಲ ಹೀಗೆ ಅವರ ಬಳಿಗೆ ಹೋಗಬಾರದೆಂದು ಪ್ರಾರ್ಥಿಸುತ್ತೇನೆ. ಅಷ್ಟೆ. ಏನಾದರೂ ಅನಾಹುತವಾದೀತು. ಆತ ಸಾಮಾನ್ಯವಾಗಿ ಅನ್ಯಾಯ ಮಾಡುವುದಿಲ್ಲವೆಂದು ಕಾಣುತ್ತದೆ. ಆದರೆ ಇತರರು ತನಗೆ ಅನ್ಯಾಯ ಮಾಡಿದರು ಎಂತ ತಿಳಿದರೆ ಪ್ರತಿಯಾಗಿ ಏನು ಮಾಡುವುದಕ್ಕೂ ಹಿಂಜರಿಯಲಾರ. ನಾವೆಲ್ಲ ಇದೇವಲ್ಲ ತಮ್ಮ ಸೇವೆ ಮಾಡುವುದಕ್ಕೆ.

ಬಾದಷಹ—ನೀವೆಲ್ಲ ಎಷ್ಟು ಇದ್ದರೂ ನಾನು ಒಂದುಸಲ ಕಣ್ಣಿನಿಂದ ನೋಡಿ ದಂತೆ ಆಗುತ್ತದೆಯೆ! ಈಗ ನೋಡಿ ನೀವು ಶಿವಾಜಿ ಎಂದರೆ ಬಹಳ ಹೆದರಿದೀರಿ ಎಂತ ಕಾಣುತ್ತದೆ. ಅವನು ಕೇಳಿದ್ದನ್ನು ಕೊಟ್ಟುಬಿಡೋಣವೆನ್ನುತ್ತೀರಿ. ನಾನು ಇಂದು ಸಂಜೆ ಅವನನ್ನು ನೋಡಿದಾಗ ಅವನಿಗೆ ಶಿಕ್ಷೆ ಕೊಟ್ಟವನು ನಾನೇ ಆದರೂ ನನಗೇ ಅಯ್ಯೋ ಎನ್ನಿಸಿತು. ರಾಜ ಎನ್ನಲೂ ಬೇಡ, ಮಂತ್ರಿಯೆನ್ನಲೂ ಬೇಡ, ಇಲ್ಲಿಂದ ಬಿಟ್ಟರೆ ಸಾಕು ಎನ್ನುವವನಂತಿದ್ದನು. ನೋಡಿದರೆ ಕಾಣುವಂತೆ ಇದು ಇತರರಿಂದ ಕೇಳಿದರೆ ಕಾಣು ವುದಿಲ್ಲ.

ಜಯಸಿಂಹ—ಇದಕ್ಕಾಗಿಯೇ ತಾವು ಇಂಥ ಕೆಲಸಕ್ಕೆ ಹೋಗಬಾರದೆನ್ನು ವುದು. ತಾವು ನೋಡಿದಾಗ ಅದು ಹಾಗೆಯೇ ಕಾಣುತ್ತದೆ. ನಿಜವಾಗಿ ಅವನು ಅಷ್ಟು ಕುಗ್ಗಿಲ್ಲ.

ರೋಷನಾರ—ಬಾದಷಹರಿಗೆ ತಿಳಿಯುವುದಿಲ್ಲ ಎನ್ನುತ್ತೀರಾ, ಮಹಾರಾಜರೆ?

ಜಯಸಿಂಹ—ಹಾಗಲ್ಲ ಬೇಗಂ ಸಾಹೇಬಾ. ದೊಡ್ಡವರ ದೃಷ್ಟಿಯಲ್ಲಿ ಒಂದು ತೇಜಸ್ಸಿದೆ. ಅದರಲ್ಲಿ ಸಿಕ್ಕಿದ ಮನುಷ್ಯನು ತಾನೇ ಅರಿಯದೆ

ಅದರ ಮುಂದೆ ತಗ್ಗುತ್ತಾನೆ. ಅಷ್ಟರಿಂದ ಅವನು ಸೋತನೆಂದು ತಿಳಿಯಕೂಡದು.

ರೋಷನಾರ—ತಾವು ಬಹಳ ಚೆನ್ನಾಗಿ ಮಾತನಾಡುತ್ತೀರಿ.

ಬಾದಷಹ—ಅಂತು ಇಂದು ಅವನನ್ನು ನೋಡಿಬಂದು ನಾಳೆಯೇ ದರ್ಬಾರಿಗೆ ಕರೆಯುವುದೆಂದು ಮನಸ್ಸುಮಾಡಿಕೊಂಡೆ. ಯಾವ ದರ್ಜೆ ಎಂತ ಹೇಳುತ್ತೇನೆಂದಿದ್ದೆನಲ್ಲಾ. ಐದು ಸಾವಿರ ಅಧಿಕಾರಿಗಳ ಜೊತೆಗೆ ಹಾಕಿದರೆ ಸಾಕು. ತಮಗೆ ಇದನ್ನು ತಿಳಿಸುವುದಕ್ಕೆಂದೇ ಕರೆಸಿದೆ.

ಜಯಸಿಂಹ—ಅಪ್ಪಣೆ (ಅವನ ಮುಖದಲ್ಲಿ ಅಸಮಾಧಾನ ಕಾಣುತ್ತದೆ).

ಬಾದಷಹ—ಏಕೆ ತಮಗೆ ಇದು ಸಮ್ಮತವಲ್ಲವೊ?

ಜಯಸಿಂಹ—ನಾನು ಮೊದಲೇ ಅರಿಕೆಮಾಡಿದ್ದೇನೆ. ತಾವು ಆತನನ್ನು ಅವನ ಸ್ವಾಧೀನದ ನಾಡಿಗೆ ರಾಜನೆಂದು ಕರೆದರೂ ಕರೆಯಬಹುದೆಂದು ಆತನಿಗೆ ಹೇಳಿದ್ದೆ. ತಾವೂ ಹೀಗೆಯೇ ಅಪ್ಪಣೆ ಮಾಡಿದ್ದಿರಿ. ಇದನ್ನು ಬಿಟ್ಟು ಏನನ್ನು ಮಾಡಿದರೂ ನಮ್ಮ ಮಾತು ತಪ್ಪಿತು. ಅಥವಾ ತಮ್ಮ ಮಾತು ಹೇಗಾದರೂ ಅವನಿಗೆ ನಾನು ಆಡಿದ ಮಾತು ತಪ್ಪಿತು.

ಬಾದಷಹ—ರಾಜ್ಯದ ಆಡಳಿತದಲ್ಲಿ ಹೇಳಿದ ಮಾತೆಲ್ಲಾ ಲೆಕ್ಕಮಾಡುತ್ತಾ ನಿಂತರೆ ಹೇಗೆ ಮಹಾರಾಜರೆ? ಕೆಲಸ ನಡೆದೀತೆ? ಇಷ್ಟಕ್ಕೆ ಮಾಡಿದರೂ ಮಾಡಿಯೇವು ಎಂದು ಹೇಳಿದೆವೇ ಏನಾ ಮಾಡುತ್ತೇವೆ ಎಂದು ಹೇಳಲಿಲ್ಲವಲ್ಲ.

ಜಯಸಿಂಹ—ಸಂತೋಷ ಜಹಾಪನಾ. ನಾನು ಹೇಳಲೇಬೇಕಾದದ್ದನ್ನೆಲ್ಲಾ ಹೇಳಿ ಆಯಿತು. ಇನ್ನೇನೂ ಹೇಳುವುದಿಲ್ಲ. ಇನ್ನು ಮಾತನಾಡಿದರೆ ನನ್ನ ದೊಡ್ಡಸ್ತಿಕೆಗಾಗಿ ಕ್ಲೇಶಪಡುತ್ತಿದ್ದೇನೆಂದು ತಾವು ತಿಳಿಯಬಹುದು. ತಮ್ಮ ಮನಸ್ಸಿಗೆ ಸೂಕ್ತ ತೋರಿದಂತೆ ಮಾಡಿ.

ಸೇವಕನೊಬ್ಬನು ಬಂದು

ಸೇವಕ— ಮುವಜನ್‌ರು ನವಾಜಿಗೆ ಕರೆಯುತ್ತಿದಾರೆ, ಖುದಾವಂದ್.

ಬಾದಷಹ—ಮಹಾರಾಜರೆ ಇಲ್ಲಿ ಇರಿ. ನಾನು ನಮಾಜ್ ಮುಗಿಸಿಕೊಂಡು ಬಂದುಬಿಡುತ್ತೇನೆ.

ಜಯಸಿಂಹ—ಅಪ್ಪಣೆ.

ಬಾದಷಹ—ತಾವೂ ನಮ್ಮೊಂದಿಗೆ ನಮಾಜಿನಲ್ಲಿ ಸೇರುವ ದಿನ ಬಂದರೆ ನಾನು ಎಷ್ಟು ಸಂತೋಷಪಟ್ಟೇನೋ? (ಎಂದು ಹೊರಡುವನು)

ಕಾಸೀಂ— ಅಪ್ಪಣೆಯಾದರೆ ನಾನೂ ನಮಾಜಿಗೆ ಹೊರಡುತ್ತೇನೆ.

ಬಾದಷಹ—ನಮ್ಮೊಂದಿಗೆ ಬರಬಹುದು. ನಮಾಜಿನಲ್ಲಿ ಬಾದಷಹನಿಗೂ ಬೇರೆಯವರಿಗೂ ಭೇದವಿಲ್ಲ.

ಕಾಸೀಂ ತಲೆಬಾಗಿ ನೆಲಮುಟ್ಟಿ ಸಲಾಂ ಮಾಡಿ ಹಿಂದೆಯೇ ಹೋಗುವನು.

ಜಯಸಿಂಹ—(ಸೇವಕನಿಗೆ) ಇಲ್ಲಿಯೇ ಇರು ಕೆಲಸವಿದೆ. (ಸೇವಕ ಒಂದುಕಡೆ ನಿಲ್ಲುವನು.)

ರೋಷನಾರ—(ಅವನಿಗೆ) ಆ ಬಾಗಿಲ ಬಳಿ ಇರು (ಎಂದು ಜಯಸಿಂಹನಿಗೆ) ಏನು ಕೆಲಸ ಅವನಿಗೆ ಮಹಾರಾಜರೆ?

ಜಯಸಿಂಹ—ಇದೆ, ಬೇಗಂ ಸಾಹೇಬಾ, ಹೇಳುತ್ತೇನೆ.

ರೋಷನಾರ—ನೀವು ಹೇಳುವುದಿಲ್ಲ. ನಾನು ಹೇಳಲೆ?

ಜಯಸಿಂಹ—ಅಪ್ಪಣೆಯಾಗಲಿ.

ರೋಷನಾರ—ನಾನು ಒಬ್ಬಳೇ ಇರುವಾಗ ನೀವು ನನ್ನ ಬಳಿ ನಿಲ್ಲುವುದಿಲ್ಲ. ಇನ್ನು ಯಾರನ್ನಾದರೂ ಜೊತೆಗೆ ನಿಲ್ಲಿಸಿಕೊಳ್ಳುತ್ತೀರಿ. ಈಗ ಸೇವಕನನ್ನು ಇರು ಎಂದದ್ದು ಅದಕ್ಕಾಗಿಯೆ ಅಲ್ಲವೆ?

ಜಯಸಿಂಹ—ತಾವಾಗಿ ಹೇಳುತ್ತಿದೀರಿ. ನಾನು ಅಲ್ಲವೆಂದು ಏಕೆ ಹೇಳಲಿ? ನಮ್ಮಲ್ಲಿ ಇದು ಶಿಷ್ಟಾಚಾರ.

ರೋಷನಾರ—ಹಿಂದೂಗಳ ನೀತಿ ಇಷ್ಟು ಅತಂತ್ರವೆಂದು ನನಗೆ ತಿಳಿಯುವುದಿಲ್ಲ. ಒಬ್ಬ ಹೆಂಗಸು ಒಬ್ಬ ಗಂಡಸು ಒಂದು ಕಡೆ ಇದ್ದ ಮಾತ್ರಕ್ಕೆ ಕೆಟ್ಟರೆ?

ಜಯಸಿಂಹ—ಕೆಟ್ಟರೋ ಇಲ್ಲವೋ ಅದನ್ನು ನಾವು ಹೇಗೆ ಹೇಳುವುದು? ಆದರೆ ಜನ ಕೆಟ್ಟದನ್ನು ಎಣಿಸಬಹುದು, ಆಡಬಹುದು. ಅದಕ್ಕಾದರೂ ಅವಕಾಶವೇಕಿರಬೇಕು?

ರೋಷನಾರ—ಏನು? ರೋಷನಾರ ಬೇಗಂ ತನ್ನ ತಂದೆಯ ವಯಸ್ಸಿನ ಜಯಸಿಂಹ ಮಹಾರಾಜರೊಂದಿಗೆ ತನ್ನ ಮರ್ಯಾದೆಗೆ ಕಡಿಮೆಯ ರೀತಿಯಲ್ಲಿ ನಡೆದುಕೊಂಡಳು ಎಂತ ಜನ ಹೇಳಿಬಿಡುತ್ತಾರೆಯೆ?

ಜಯಸಿಂಹ—ಬೇಗಂ ಸಾಹೇಬಾ, ಜನ ಇದನ್ನು ಹೇಳಬಹುದು, ಇದನ್ನು ಹೇಳಲಾರರು ಎನ್ನುವುದಕ್ಕಿಲ್ಲ. ತಾವು ಜನಾನಾದಿಂದ ಹೀಗೆ ಬರುವುದೇ ನಿಮ್ಮವರ ವಾಡಿಕೆಗೆ ವಿರೋಧ. ಆಚಾರಶೀಲ ರಾದ ನಿಮ್ಮಣ್ಣಂದಿರು ಇದಕ್ಕೆ ಒಪ್ಪಿರುವುದು ಆಶ್ಚರ್ಯವೇ ಸರಿ. ಇದರಲ್ಲಿ ಹಿಂದೂವೊಂದಿಗೆ ಒಬ್ಬರೇ ಕುಳಿತು ಮಾತ ನಾಡಿದರೆ ಕೆಟ್ಟಗಳಿಗೆಯಲ್ಲಿ ಬಾದಷಹರೇ ನನ್ನ ವಿಷಯದಲ್ಲಿ ಸಂದೇಹಪಡಬಹುದು.

ರೋಷನಾರ—ತನ್ನ ತಂಗಿ, ಷಹಜಾದೆ, ಸುಶೀಲೆ ಎಂಬುದನ್ನು ನಮ್ಮಣ್ಣಂದಿರು ಮರೆಯುವರೆ?

ಜಯಸಿಂಹ—ವಿಷದ ಗಳಿಗೆಯಲ್ಲಿ ಇದೆಲ್ಲಾ ಜ್ಞಾಪಕ ಬರುವುದಿಲ್ಲ, ಬೇಗಂ ಸಾಹೇಬಾ. ಮನೆಯ ಮಾತಿನಲ್ಲಿ ಮತದ ಮಾತಿನಲ್ಲಿ ಮನುಷ್ಯ ನಿಗೆ ವಿವೇಕವಿರುವುದಿಲ್ಲ.

ರೋಷನಾರ—ಅಂತೂ ಈ ಮತ ಈ ಆಚಾರ ಎನ್ನುವುದೆಲ್ಲ ಸ್ವಲ್ಪ ಅತಿ ಸ್ವಲ್ಪ ವೇಷ ಅಲ್ಲವೆ?

ಜಯಸಿಂಹ—ಎಲ್ಲಾ ವೇಷ ಎಂತ ಹೇಗೆ ಹೇಳುವುದು? ಬಾದಷಹರು ನಿಜವಾ ಗಿಯೂ ಆಚಾರಶೀಲರು. ಬೇಕಾದರೆ ಈ ಖಾನ್ ಸಾಹೇಬರು ಇದಾರಲ್ಲಾ ಅವರದು ವೇಷವೆನ್ನಬಹುದು. ಬಾದಷಹರಿಗೆ ತಿಳಿಯುವಹಾಗೆ ತಾವು ನಮಾಜ್ ಮಾಡುವವರು ಎನ್ನು ವುದನ್ನು ತೋರಿಸಿಕೊಳ್ಳುತ್ತಾರೆ. ಇವರು ನಮಾಜ್ ಮಾಡುವ ವಿಚಾರ ದೇವರಿಗೆ ತಿಳಿದರೆ ಸಾಲದು.

ರೋಷನಾರ—ಅದು ನ್ಯಾಯ ನೋಡಿ. ಎತ್ತಿಕೊಳ್ಳುತಾ ದೇವರು ಇದಾನೋ ಇಲ್ಲವೋ ಸಂದೇಹ. ಇದ್ದರೂ ನಮಾಜಿಗೆ ಪ್ರತಿಫಲ ಕೊಡು ತ್ತಾನೋ ಇಲ್ಲವೋ ಹೇಳುವಹಾಗಿಲ್ಲ. ಬಾದಷಹರಿಗೆ ತಿಳಿದರೆ ಅವರು ಇವನು ಒಳ್ಳೆಯವನು ಎಂದುಕೊಳ್ಳುತ್ತಾರೆ.

ಏನಾದರೂ ಒಳ್ಳೆಯದು ಮಾಡುತ್ತಾರೆ. ಆದ್ದರಿಂದ ಅವರಿಗೆ ತಿಳಿಯುವಹಾಗೆ ಮಾಡುವುದು ಬುದ್ಧಿ.

ಜಯಸಿಂಹ—(ನಗುತ್ತಾ) ನಿಜ. ನಮ್ಮವರೂ ಹಾಗೆಯೇ. ದೇವರ ಪೂಜೆ ಮಾಡುತ್ತಾ ಊರಿಗೆಲ್ಲಾ ಕೇಳುವಹಾಗೆ ಮಂತ್ರ ಹೇಳುವುದು, ಗಂಟೆ ಬಾರಿಸುವುದು. ದೇವರು ಕಿವುಡು ಎಂದು ಕೊಂಡಿದ್ದಾರೋ ಎನ್ನಿಸುತ್ತೆ ಇದನ್ನು ನೋಡಿದರೆ.

ರೋಷನಾರ—ದೇವರು ಕಿವುಡನೇ ಇರಬೇಕು. ಕಲ್ಪಾಂತರದ ಮುದುಕನಿಗೆ ಕಿವಿ ಮಂದವಾಗದೆ ಇರುತ್ತದೆಯೆ? ಅಲ್ಲದೆ ನೋಡಿ. ಜಗಳ ಮಾಡುವರೆಲ್ಲಾ ಇವನು ಅವನನ್ನ ಕೆಡಿಸು ಎಂತ ಅವನು ಇವನನ್ನ ಕೆಡಿಸು ಎಂತ ಕೂಗುತ್ತಲೇ ಇರುತ್ತಾರೆ. ಇದು ಕೇಳಿಕೇಳಿ ಸಾಕಾಗಿ ದೇವರು ಪೂಜೆ ಹೊತ್ತಿಗೆ ಸರಿಯಾಗಿ ಇವರು ಕಿವಿ ಮುಚ್ಚಿಕೊಳ್ಳುವ ಹಾಗೆ ತಾನೂ ಕಿವಿ ಮುಚ್ಚಿ ಕೊಳ್ಳುತಾನೆ ಎಂತ ಕಾಣುತ್ತೆ.

ಜಯಸಿಂಹ—(ನಗುತ್ತಾ) ನಿಮಗೆ ದೇವರು ಎಂದರೆ ಬಹಳ ಪರಿಹಾಸ್ಯವಾಗಿದೆ.

ರೋಷನಾರ—ನಮ್ಮಣ್ಣ ದಾರಾ ಇಂತ ಮಾತು ಎಷ್ಟು ಹೇಳಿ ನಗುತ್ತಾ ಇದ್ದರೋ. ಅದನ್ನು ಕೇಳಿಕೇಳಿ ನನಗೆ ಈ ಪೂಜೆ ಈ ನಮಾಜು ಬರೀ ಆವುಟ ಎಂದು ಎನ್ನಿಸಿಬಿಟ್ಟಿತ್ತು. ಅಯ್ಯೋ ಪಾಪ! ತಮಾಷೆಗೆ ಹೀಗೆ ಮಾತನಾಡುತ್ತಿದ್ದರೇ ಹೊರತು ಅವರಿಗೆ ದೇವರು ಎಂದರೆ ನಿಜವಾಗಿ ಭಕ್ತಿಯಿತ್ತು.

ಜಯಸಿಂಹ—ಹೌದು ಬೇಗಂ ಸಾಹೇಬಾ.

ರೋಷನಾರ—ಮಹಾರಾಜರೆ, ನಿಮ್ಮನ್ನ ಒಂದು ಮಾತು ಕೇಳಬೇಕು ಎಂತ ಇದ್ದೆ. ಈಗ ಕೇಳಿ ಬಿಡುತ್ತೇನೆ. ನಮ್ಮಣ್ಣನ ಹತ್ತಿರ ಬರುವವರಲ್ಲೆಲ್ಲ ನೀವು ಒಬ್ಬರು ಸಾಫಾಗಿ ಮಾತನಾಡಿ ಅವರಿಗೆ ಒಳ್ಳೆಯದಾಗಲಿ ಎಂತ ನಿಜವಾಗಿ ಕಷ್ಟಪಡುತ್ತೀರಿ. ನ್ಯಾಯವಾಗಿ ನೀವು ಹಿಂದೂಗಳು; ಸ್ವಲ್ಪವಾದರೂ ಅಸೂಯೆ ಇರಬೇಕಲ್ಲ. ಇದೇನು ಮುಸಲ್ಮಾನ್ ರಾಜ್ಯಕ್ಕೆ ಇಷ್ಟು ಮೆಹನತ್ತು ಮಾಡುತ್ತೀರಿ?

ಜಯಸಿಂಹ—(ಸ್ವಲ್ಪ ತಲೆಯನ್ನು ತಗ್ಗಿಸಿ) ಅದಕ್ಕೆ ಕಾರಣವಿದೆ, ಬೇಗಂ ಸಾಹೇಬಾ.

ರೋಷನಾರ—ನನಗೆ ಹೇಳಬಾರದೆ?

ಜಯಸಿಂಹ—(ಸ್ವಲ್ಪ ಸುಮ್ಮನಿದ್ದು) ಹೇಳುತ್ತೇನೆ. ಈಗ ನೋಡಿ ನಮ್ಮಲ್ಲಿ ನಾನೇ ಹಿರಿಯ ರಾಜ. ನಮ್ಮವರು ಅದಕ್ಕೆ ಒಪ್ಪುವುದಿಲ್ಲ. ಅಥವಾ ಒಪ್ಪಿದರು : ನಾಲ್ಕು ಜನ ಒಪ್ಪುತ್ತಾರೆ; ನಾಲ್ಕು ಜನ ಒಪ್ಪುವುದಿಲ್ಲ. ನನಗೆ ಬೇಡ ; ಇನ್ಯಾರಿಗಾದರೂ ಎಲ್ಲರ ಸಮ್ಮತಿ ಸಿಕ್ಕುತ್ತದೆಯೇ ಎಂದರೆ ಸಿಕ್ಕುವುದಿಲ್ಲ. ಒಬ್ಬೊಬ್ಬನೂ ಬೇರೆಯವರನ್ನು ಕರೆಯಿಸಿಕೊಂಡು ಅವರೊಂದಿಗೆ ಸೇರಿಕೊಂಡು ತನ್ನ ಜನಕ್ಕೆ ತಾನೇ ಕೇಡು ತರುತ್ತಾನೆ. ನಮ್ಮ ರಾಜ್ಯಗಳು ಕೆಟ್ಟದ್ದೇ ಹೀಗೆ. ಇನ್ನು ಈ ದೇಶಕ್ಕೆ ಏನು ಗತಿ? ನಮ್ಮ ನಮ್ಮ ಜಗಳದಲ್ಲಿ ದೇಶ ಹಾಳಾಗುವುದಕ್ಕಿಂತ ಚಕ್ರವರ್ತಿ ಎನ್ನುವ ಜಗಳವಿಲ್ಲದಹಾಗೆ ಹೊರಗಿನವರನ್ನು ಒಪ್ಪಿಕೊಂಡರೆ ರಾಜ್ಯ ಸುಖವಾಗಿರುತ್ತದೆ. ಅದರಿಂದ ಚಕ್ರವರ್ತಿಯಾಗಿ ನಾವು ಮಾಡುವ ಕೆಲಸವನ್ನೇ ಬೇರೆಯವರಿಂದ ನಡೆಸೋಣ ಎಂದು ನಮ್ಮ ಹಿರಿಯರು ಮನಸ್ಸು ಮಾಡಿದರು. ನಿಮ್ಮ ತಾತಂದಿರು ಪುಣ್ಯಪುರುಷರು. ಹಿಂದೂ ಮುಸಲ್ಮಾನ ಎಂಬ ಭೇದವಿಲ್ಲದೆ ನಡೆದುಕೊಂಡು ನಮ್ಮಂತವರು ಮರ್ಯಾದೆಯಿಂದ ಅವರ ಹತ್ತಿರ ಇರುವುದನ್ನು ಸಾಧ್ಯಮಾಡಿದರು. ಅಂದಿನಿಂದ ಹಾಗೆಯೇ ನಡೆದುಬಂದಿದೆ. ಹಿಂದೂಗಳು ಎಂದರೆ ನಿಮ್ಮಣ್ಣನವರಿಗೆ ಇನ್ನೂ ಸ್ವಲ್ಪ ಅಸಹನೆ ಇದೆ. ಆದರೆ ಇಷ್ಟರಲ್ಲೇ ಅವರನ್ನ ಒಪ್ಪಿಸುತ್ತೇನೆ. ಈ ಜಜಿಯಾ ತೆಗೆಸುತ್ತೇನೆ. ಈ ವಿಷಯದಲ್ಲಿ ನನಗೆ ನಂಬಿಕೆ ಉಂಟು. ಹೀಗೆ ನಡೆಯುವುದರಿಂದ ನಮ್ಮ ಸೀಮೆಗೂ ಒಳ್ಳೆಯದಾಯಿತು; ಚಕ್ರವರ್ತಿಗೂ ಒಳ್ಳೆಯದಾಯಿತು. ಇದಕ್ಕಾಗಿ ಬೇಗಂ ಸಾಹೇಬಾ, ಇಷ್ಟೂ ಮಾಡುತ್ತಿರುವುದು. ಬೇಸರವಾಯಿತೋ ಮುದುಕನ ಮಾತನ್ನು ಕೇಳಿ.

ರೋಷನಾರ—ಇಲ್ಲ. ಬೇಸರವಿಲ್ಲ. ಆಹಾ ಎಷ್ಟು ಒಳ್ಳೆಯವರು ನೀವು. ನಿಮ್ಮ ಮಾತು ಕೇಳುತ್ತಿರಬೇಕಾದರೆ ನನ್ನ ಮನಸ್ಸು ಕರಗಿತು. ನೀವು ಹೇಳಿದ್ದನ್ನ ನಮ್ಮಣ್ಣ ಕೇಳಿದ್ದರೆ ನಿಮ್ಮ ಇಷ್ಟದಂತೆ ನಡೆದುಕೊಂಡಾರು. ಈ ಶಿವಾಜಿಯ ವಿಷಯದಲ್ಲಿ ನೀವು ಹೇಳುವಂತೆ ಮಾಡಬೇಕು ಎಂತ ನಾನು ಅಣ್ಣನವರಿಗೆ ತಿಳಿಸುತ್ತೇನೆ.

ಜಯಸಿಂಹ—ತಾವು ಹಾಗೆ ಹೇಳುವುದು ಒಳ್ಳೆಯದು. ಇಷ್ಟು ದಿನ ದರಬಾರಿಗೆ ಕರೆಯಲು ನಾವಕಾಶಮಾಡಿದ್ದೇ ಶಿವಾಜಿ ರಾಜನಿಗೆ ಅಸಮಾಧಾನವಾಗಿದೆ.

ರೋಷನಾರ—ದರಬಾರಿಗೆ ಕರೆಯುವುದಕ್ಕೆ ಸ್ವಲ್ಪ ದಿನವಾಗಲಿ ಎಂದು ನೀವೇ ಹೇಳಿದಿರಷ್ಟೆ.

ಜಯಸಿಂಹ—ಹೌದು, ನಾವು ಇಲ್ಲಿಗೆ ಬಂದಾಗ ಅಲ್ಲಿ ದಿಲೀರ್ ಖಾನ್ ಬಿಜಾಪುರದೊಂದಿಗೆ ಯುದ್ಧ ಮಾಡಿದ್ದರೆ ಸಾಕಾಗಿತ್ತು. ಒಂದುಕಡೆ ಇವನು, ಇನ್ನೊಂದುಕಡೆ ಬಿಜಾಪುರದವನು ಆಗಿದ್ದರೆ ಅವನ ಕೆಲಸ ಕಷ್ಟವಾಗುತ್ತಿತ್ತು. ಆದ್ದರಿಂದ ಸ್ವಲ್ಪ ತಡೆಯೋಣವೆಂದೆ. ಈಗ ಅಲ್ಲಿ ಸ್ಥಿತಿ ಸ್ವಲ್ಪ ಸರಿಹೋಗಿದೆ. ಬಿಜಾಪುರ ಹಿಡಿತಕ್ಕೆ ಬಂದಿದೆ. ಈತನಿಗೆ ರಾಜನೆಂಬ ಬಿರುದು ಕೊಟ್ಟು ಕಳುಹಿಸಿದರೆ ಇವನು ನಮ್ಮವನಾಗಿರುತ್ತಾನೆ. ರಾಜ್ಯವೆಲ್ಲ ನಮ್ಮ ವಶವಾದಂತಾದೀತು. ಇಲ್ಲದಿದ್ದರೂ ಇವನನ್ನೊಬ್ಬನನ್ನು ಹತೋಟಿಯಲ್ಲಿಡುವುದು ಕಷ್ಟವಲ್ಲ.

ರೋಷನಾರ—ರಾಜನೆಂದು ಬಿರುದು ಕೊಡದೇ ಇದ್ದರೆ ತೊಂದರೆ ಎನ್ನುತ್ತೀರಾ?

ಜಯಸಿಂಹ—ಕೊಡುವುದು ಒಳ್ಳೆಯದು; ಇಲ್ಲದಿದ್ದರೆ ಅತೃಪ್ತನಾಗಿ ಹಿಂದಕ್ಕೆ ಹೋಗುತ್ತಾನೆ.

ರೋಷನಾರ—ನಿಮ್ಮದು ಎಷ್ಟು ದೂರಾಲೋಚನೆ. ನಾನು ಇದನ್ನೆಲ್ಲ ಅಣ್ಣನವರಿಗೆ ಹೇಳುತ್ತೇನೆ.

ಜಯಸಿಂಹ—ಹೇಳಿ ಬೇಗಂ ಸಾಹೇಬಾ. ಆದರೆ ಅವರು ಕೇಳುವುದಿಲ್ಲ. ಅವರಿಗೆ ಈ ಖಾನರ ಬೋಧೆ ಹೆಚ್ಚಾಯಿತು.

ಸೇವಕನು ಪ್ರವೇಶಿಸುವನು.

ಸೇವಕ— ಬಾದಷಹರು ಪೂರ್ವದ ಹಜಾರದಲ್ಲಿ ಕುಳಿತಿದಾರೆ. ಅನುಕೂಲ ನಾದರೆ ಮಹಾರಾಜರು ಅಲ್ಲಿಗೆ ದಯಮಾಡಿಸಬೇಕೆಂದರು.

ರೋಷನಾರ—ತಾವು ಅಲ್ಲಿಗೆ ಹೊರಡಿ. ನಾನು ಒಳಗೆ ಹೋಗುತ್ತೇನೆ. ತಮ್ಮ ಮಾತು ನನಗೆ ಜ್ಞಾಪಕವಿರುತ್ತದೆ.

ಜಯಸಿಂಹ--(ಸಲಾಂ ಮಾಡಿ) ಸಂತೋಷ, ಬೇಗಂ ಸಾಹೇಬಾ, ಆದಾಬ್.

ರೋಷನಾರ--(ಕೈಮುಗಿದು) ರಾಂ ರಾಂ.

ಹೊರಡುವರು.

———

## ಅಂಕ ೩

### ಸ್ಥಾನ ೧

ಶಿವಾಜಿಯ ಬಿಡಾರದಲ್ಲಿ ಪೂಜಾಗೃಹ.

ಅಂಬಾ ಭವಾನಿಯ ಪಟ. ಹಾರ ಹಾಕಿದೆ. ಅದರ ಮುಂದೆ ಶಿವಾಜಿ ತಲೆಬಾಗಿ ಕೈ ಮುಗಿದು ನಿಂತಿದಾನೆ. ಒಂದು ಕ್ಷಣವಾದ ಮೇಲೆ

ಶಿವಾಜಿ— ದೇವೀ ಭಗವತೀ, ಅಂಬಾಭವಾನಿ, ನನಗೆ ಜನ್ಮವನ್ನು ಕೊಟ್ಟು ದೊಡ್ಡವನನ್ನು ಮಾಡಿ, ದಾಸನಾಗಿದ್ದವನಿಗೆ ರಾಜನಾಗೆಂದು ಅಪ್ಪಣೆಕೊಟ್ಟು, ಧನವಿತ್ತು ಬಲವಿತ್ತು ಜಯವಿತ್ತು, ನೀನು ನನ್ನ ಮಗು, ನಿನ್ನನ್ನು ನಾನು ಸಲಹುತ್ತೇನೆ ಎಂದು ಅಂತ ರಂಗದಲ್ಲಿ ಅರಿಯಿಸಿ ಬಹಿರಂಗದಲ್ಲಿ ತೋರಿ, ನನ್ನನ್ನು ಇಷ್ಟು ದೂರ ನಡೆಯಿಸಿ ತಂದೆ. ನೀನು ನಡೆಸದೆ ನಾನು ನಡೆಯಲಿಲ್ಲ; ನೀನು ನಡೆಸದೆ ನಾನು ನಡೆಯಲಾರೆ. ನೀನು ಅಪ್ಪಣೆಮಾಡದೆ ಗಾಳಿ ಹುಲ್ಲನ್ನು ಅಲುಗಿಸದು. ಜಗತ್ತಿನ ಕಾರ್ಯಕ್ಕೆಲ್ಲ ನೀನು ಕಾರಣಭೂತಳು. ದೇವೀ, ಲೋಕಮಾತೆ.

ಅಂಬಾ, ಭಗವತೀ, ನೀನು ನಡೆಸಿದೆ; ನಾನು ನಡೆದೆ. ವೃಕ್ಷಗಳು ತಡೆಯದ ಬಿರುಗಾಳಿಯನ್ನು ಹುಲ್ಲಾದ ನಾನು ಎದುರಿಸಿದೆ. ಹುಲ್ಲಿಗೆ ನೀನು ಸತ್ವ ಕೊಟ್ಟೆ. ಬಿರುಗಾಳಿ ಸೋತಿತು. ನೀನು ಜೊತೆಯಲ್ಲಿರುವೆ ಎಂಬ ಧೈರ್ಯದಿಂದ ನಿನ್ನ ರಾಜ್ಯವನ್ನು ಸಂಪಾದಿಸುವುದಕ್ಕೆ ನಾನು ಇಲ್ಲಿಗೆ ಬಂದೆ. ಇದು ನಿನ್ನ ಕೆಲಸ. ನೀನು ಮಾಡಿಸು. ಇದುವರೆಗೆ ನಡೆಸಿದ ವಳು ಈಗಲೂ ನಡೆಸು. ನಿನ್ನ ಮಗುವನ್ನು ರಕ್ಷಿಸು; ನಿನ್ನ ರಾಜ್ಯವನ್ನು ಸ್ಥಾಪಿಸು. ನಿನ್ನ ಧರ್ಮದ ಪಾಲನೆಗೆ ನೀನು ಮಂತ್ರಿಸಿಟ್ಟ ಈ ಹುಲ್ಲನ್ನು ನಾಯಿಗಳು ಮುಟ್ಟದಂತೆ, ಮ್ಲೇಚ್ಛರು ಸುಡದಂತೆ ನೀನೇ ನೋಡಿಕೋ. ತಾಯಿ, ಲೋಕಮಾತೇ.

ಅಂಬಾ, ಅಂಬಾ. ನಿನ್ನ ಇಷ್ಟವನ್ನು ನಾನರಿಯೆ. ನಾನು ಏನಾದರೆ ನಿನ್ನ ಧರ್ಮ ಸಾಗುವುದೋ ನೀನು ಬಲ್ಲೆ. ನನ್ನ ಜೀವ ಇಲ್ಲಿ ಬಲಿಯಾಗುವುದರಿಂದ ನಿನ್ನ ಸಾಮ್ರಾಜ್ಯ ಬೆಳೆಯುವುದಾದರೆ ಹಾಗೆಯೇ ಆಗಲಿ. ನಾನು ಬೇಡವೆನ್ನುವುದಿಲ್ಲ. ಆಗ್ಯೆ ನನ್ನಲ್ಲಿ ಪೂರ್ಣ ಸಾನ್ನಿಧ್ಯವನ್ನು ನೀಡು. ಈ ಎದೆ ನಡುಗದಂತೆ, ಹಗೆ ನೋಡಿ ನಗದಂತೆ ನನ್ನ ನಡೆಯನ್ನು ತಿದ್ದು. ಒಂದೊಂದು ಮಾತಾಡುವಾಗಲೂ, ಒಂದೊಂದು ಕೆಲಸ ಮಾಡುವಾಗಲೂ ಸರಿಯೋ ತಪ್ಪೋ ಎಂದು ನಿನ್ನನ್ನು ನೆನೆದು ಆಡುವುದು ಮಾಡುವುದು ನನಗೆ ಬರಲಿಲ್ಲ. ಆದ್ದರಿಂದ ಮುಂದಾಗಿ ಬೇಡುತ್ತೇನೆ. ಎಲ್ಲ ಸ್ಥಳದಲ್ಲಿ, ಎಲ್ಲ ಸಮಯದಲ್ಲಿ, ಎಲ್ಲ ಸಂದರ್ಭದಲ್ಲಿ ನನಗೆ ಒಳ್ಳೆಯ ಯೋಚನೆಯನ್ನು ಕೊಡು, ಒಳ್ಳೆಯ ಮಾತನ್ನು ಕೊಡು, ಒಳ್ಳೆಯ ವರ್ತನೆಯನ್ನು ಕೊಡು. ನನ್ನನ್ನು ಎಂದಿನಂತೆ ನಿನ್ನವನೆಂದು ನೋಡು, ಕೃಪೆಮಾಡು, ಕಾಪಾಡು. ದೇವೀ ಲೋಕಮಾತೇ.

ದೇವೀ ಭವಾನೀ, ನಾನು ಬೇಡುವುದನ್ನು ಮನ್ನಿಸು. ನೀನರಿಯೆಯಾ? ನಿನಗೆ ನಾನು ಹೇಳಬೇಕೇ? ನೀನೇ ರಕ್ಷಿಸಿದೆ, ರಕ್ಷಿಸುತ್ತಿದೀಯೆ, ರಕ್ಷಿಸುವೆ. ನನಗೆ ನಿನ್ನಲ್ಲಿ ನಂಬಿಕೆಯನ್ನು ಕೊಡು. ನೀನೇ ಗತಿಯೆಂಬುದನ್ನು ಕಲಿಸು. ಎಲ್ಲ ನಿನ್ನದೆಂಬುದನ್ನ ತಿಳಿಸು. ನನ್ನ ಈ ಬಾಳನ್ನು ಉದ್ಧಾರಮಾಡು. ಅಂಬಾ, ಅಂಬಾ, ಅಂಬಾ. (ಎಂದು ಸಾಷ್ಟಾಂಗ ಪ್ರಣಾಮ ಮಾಡುವನು. ಪರದೆ ಬೀಳುವುದು.)

---

## ಸ್ಥಾನ ೨

ಶಿವಾಜಿಯ ಬಿಡಾರದ ಮುಂದೆ. ಶಿವಾಜಿ, ಹಿಂದೆ ಪಿಂಗಳೆ, ಎದುರುಗಡೆಯಿಂದ ಕಲ್ಯಾಣದ ಮುಲಾನಾ.

ಮುಲಾನಾ--ರಾಜರಿಗೆ ಮಂಗಳವಾಗಲಿ.

ಶಿವಾಜಿ— (ಗುರುತಿಸದೆ, ಸ್ವಲ್ಪ ಹಿಂದಕ್ಕೆ ಸರಿದು) ರಾಂ ರಾಂ. ತಾವು ಯಾರು?

ಮುಲಾನಾ—ನೋಡಿ, ಗುರುತು ಸಿಕ್ಕುತ್ತದೆಯೇನೊ.

ಶಿವಾಜಿ— (ದೂರದಿಂದಲೇ ನೋಡಿ) ಕಲ್ಯಾಣದ ನಮ್ಮ ಮುಲಾನಾ ಸಾಹೇಬರೆ?

ಮುಲಾನಾ—ಹೌದು ರಾಜರೇ, ನಾನು ತಮ್ಮನ್ನು ನೋಡಿ ಎರಡು ಮಾತು ಹೇಳಬೇಕೆಂದೇ ಬಂದೆ.

ಶಿವಾಜಿ— ಒಳಗೆ ಹೋಗೋಣವೆ? ತಾವು ಇಲ್ಲಿಗೆ ಯಾವಾಗ ಬಂದಿರಿ, ಯಾಕೆ ಬಂದಿರಿ? ಏನು ವಿಷಯ?

ಮುಲಾನಾ—ಒಳಗೆ ಹೋಗಬೇಕಾದದ್ದಿಲ್ಲ. ತಾವು ದರ್ಬಾರಿಗೆ ಹೊರಟಿದೀರಿ. ಬಹಳ ಹೊತ್ತು ಇಲ್ಲ. ಹತ್ತಿರ ಯಾರೂ ಇಲ್ಲವಾದ್ದರಿಂದ ಹೇಳುವ ಮಾತು ಇಲ್ಲಿಯೇ ಹೇಳಿಬಿಡುತ್ತೇನೆ. ನೀವು ಆಗ್ರಾಕ್ಕೆ ಬರುತ್ತೀರಿ ಎಂತ ಕೇಳಿದಾಗಲೆ ನಾನು ಸ್ವಲ್ಪ ಶಂಕೆಪಟ್ಟೆ. ಆದರೆ ಸಂಸಾರ ಬಿಟ್ಟವನಿಗೆ ಇದೇಕೆಂದು ಮನಸ್ಸನ್ನು ಮುಕ್ಕಾ ಕಡೆಗೇ ಇಟ್ಟಿದ್ದೆ. ಅಷ್ಟರಲ್ಲಿ ನಮ್ಮ ಕಾಸೀಂ ಇಲ್ಲಿಗೆ ಹೊರಟಿದಾನೆಂದು ಗುಪ್ತವಾಗಿ ತಿಳಿಯಿತು. ನೀವು ನಮ್ಮ ಹುಡುಗಿಯನ್ನು ಅವಳ ಗಂಡನ ಬಳಿ ಕಳುಹಿಸಿದ್ದನ್ನು ಈತನು ತನಗೆ ಅಪಮಾನವೆಂದು ಎಣಿಸಿದನು. ಇಲ್ಲಿಗೆ ನೀವು ಬರುವ ಮಾತು ತಿಳಿದು ಅವನು ಹೊರಟನೆಂದರೆ ನಿಮಗೆ ಇಲ್ಲಿ ಏನುಮಾಡುವನೋ ಎಂದು ನನಗೆ ಭಯವಾಯಿತು. ನೀವು ಅಂದು ನಮಗೆ ತೋರಿದ ಸೌಜನ್ಯದಿಂದ ನಿಮಗೆ ಕೇಡಾಗದಂತೆ ನೋಡಿಕೊಳ್ಳುವುದು ನನ್ನ ಕರ್ತವ್ಯವೆಂದು ತೋರಿತು. ನಿಮ್ಮೆಲ್ಲರ ಹಿಂದೆ ಇಲ್ಲಿಗೆ ಹೊರಟೆನು. ಮಧ್ಯೆ ತೊಂದರೆಗಳಾಗಿ ಮೂರು ದಿನಗಳ ಹಿಂದೆ ಇಲ್ಲಿಗೆ ಬಂದು ಸೇರಿದೆನು. ಅಲ್ಲಿ ಇಲ್ಲಿ ಕೇಳಿ ವಿಷಯವನ್ನು ತಿಳಿದುಕೊಂಡಿದೇನೆ. ಅವನು ಇಲ್ಲದ್ದು ಸಲ್ಲದ್ದನ್ನು ಹೇಳಿ ಬಾದಷಹರ ಮನಸ್ಸನ್ನು ಕೆಡಿಸಿದಾನೆ. ನಿಮಗೆ ನಾನು ಹೇಳುವುದು ಇಷ್ಟೆ. ಬಾದಷಹ ದೈವಭಕ್ತರು; ಈ ಭಕ್ತಿ ಒಂದೊಂದುಸಲ ವಿಚಿತ್ರವಾಗುತ್ತದೆ; ಆದರೆ ಒಟ್ಟಿನಲ್ಲಿ ಆತ

ಕೆಟ್ಟವರಲ್ಲ. ತಾವು ಅವರ ಬಳಿ ದುಡುಕಬೇಡಿ. ಅವರು ಏನಾದರೂ ಒಂದು ಮಾತು ಹೇಳಿದರೆ ಸಮಾಧಾನವಾಗಿ ಉತ್ತರಕೊಟ್ಟು ಈ ದಿನ ಗಲಭೆಯಿಲ್ಲದೆ ಹಿಂದಕ್ಕೆ ಬನ್ನಿ. ನೀವು ನಿಮ್ಮ ಊರನ್ನು ಸುರಕ್ಷಿತವಾಗಿ ಸೇರುವಿರಿ. ನಿಮಗೆ ಇಷ್ಟರಲ್ಲೇ .ರಾಜರೆಂಬ ಹೆಸರನ್ನು ಕೊಡುವರು. ಇಂದು ಅವರು ಏನು ಮಾಡಿದರೂ ದುಡುಕದಂತೆ ಇರಬೇಕು. ಅಷ್ಟೆ. ಇದನ್ನು ನಿಮಗೆ ಹೇಳೋಣವೆಂದು ಬಂದೆ. ದಯವಿಟ್ಟು ನನಗಾಗಿ ತಮಗಾಗಿ ಇಷ್ಟನ್ನ ತಾವು ನಡೆಯಿಸಬೇಕು.

ಶಿವಾಜಿ— ಮುಲಾನಾ ಸಾಹೇಬ್, ತಮ್ಮ ವಿಶ್ವಾಸವನ್ನು ಎಷ್ಟು ಹೊಗಳಿದರೂ ಸಾಲದು. ತಾವು ಯಾತ್ರೆ ಹೋಗುವುದನ್ನು ಬಿಟ್ಟು ಇದಕ್ಕಾಗಿ ಇಲ್ಲಿಗೆ ಬಂದಿದ್ದೀರಲ್ಲಾ!

ಮುಲಾನಾ—ನಾನು ಬಂದ ಕಾರಣ ಹೇಳಿದೆನಲ್ಲಾ. ನಮ್ಮ ಕಾಸೀಂ ಸೈತಾನನಂತೆ. ದುಷ್ಟ. ಇವನಿಂದ ನಿಮಗೆ ತೊಂದರೆಯಾದೀತು ಎಂತ ತೋರಿ ಓಡಿಬಂದೆ. ನಾನು ಹೇಳಿದ ಮಾತು ಜ್ಞಾಪಕ ವಿರಲಿ. ದುಡುಕಬೇಡಿ.

ಶಿವಾಜಿ— ನೋಡೋಣ ಮುಲಾನಾ ಸಾಹೇಬ್. ಏನು ಮಾಡಿದರೂ ಸುಮ್ಮನಿರುತ್ತೇನೆ ಎನ್ನುವುದಕ್ಕೆ ಆಗುವುದಿಲ್ಲ. ನೋಡೋಣ. ನನ್ನನ್ನು ಕರೆಯಿಸಿಕೊಂಡಿದಾರೆ. ನನ್ನನ್ನು ಸರಿಯಾಗಿ ಕಾಣುವುದು ಅವರ ಭಾರ.

ಮುಲಾನಾ—ಇನ್ನು ತಾವು ಹೊರಡಿ. ನಿಮಗೆ ಮಂಗಳವಾಗಲಿ. ನಾನು ತಮ್ಮ ಜೊತೆಯಲ್ಲಿ ಅಲ್ಲಿಯವರೆಗೆ ಬಂದು ಮುಂದೆ ತಿರುಗುತ್ತೇನೆ.

ಶಿವಾಜಿ— ನಮಗಾಗಿ ಬಹಳ ತೊಂದರೆ ತೆಗೆದುಕೊಂಡಿರಿ.

ಎಂದು ಹೊರಡುವರು.

---

## ಸ್ಥಾನ ೩

ಔರಂಗಜೇಬನ ಆಸ್ಥಾನ ಮಂಟಪ. ದರ್ಬಾರಿಗಳು ಬರುತ್ತಾ ಇದಾರೆ.
ಜಯಸಿಂಹ ಶಿವಾಜಿಯನ್ನು ಬಾಗಿಲಲ್ಲಿ ಕಾಣುತ್ತಾನೆ.

ಜಯಸಿಂಹ—ದಯಮಾಡಿ ಮಹಾರಾಜ್.

ಶಿವಾಜಿ— ನಮಸ್ಕಾರ. (ಎಂದು ಸುತ್ತಲೂ ನೋಡಿ) ಬಹಳ ಜನ ಇರುವ ಹಾಗೆ ಕಾಣಲಿಲ್ಲ.

ಜಯಸಿಂಹ—ಇಲ್ಲ. ಇಂದು ಸಣ್ಣ ದರ್ಬಾರು.

ಶಿವಾಜಿ— ಅದೇಕೆ?

ಜಯಸಿಂಹ—ಅಂದಂದು ಯಾರ ಯಾರನ್ನು ಕರೆಯುವುದು ಎಂತ ಅಪ್ಪಣೆ ಯಾಗುತ್ತದೆ. ಅಷ್ಟು ಜನರನ್ನು ಕರೆಯುತ್ತದೆ. ಈ ದಿನ ಇದುವರೆಗೆ ಕರೆಯದ ಕೆಲವರನ್ನು ಮಾತ್ರ ಕರೆದಿದಾರೆ. ಆದ್ದರಿಂದ ಹೆಚ್ಚು ಗುಂಪು ಇಲ್ಲ. (ಇಷ್ಟು ಹೊತ್ತಿಗೆ ಭಕ್ಷಿ ಇವರ ಬಳಿ ಬರುವನು.)

ಭಕ್ಷಿ— (ಜಯಸಿಂಹನಿಗೆ; ಶಿವಾಜಿಗೆ ಕೇಳಿಸುವಹಾಗೆ) ಮನ್ಸಬ್ದಾರ್ ಶಿವಾಜಿ ಸಾಹೇಬರಲ್ಲವೆ?

ಜಯಸಿಂಹ—ಹೌದು ಶಿವಾಜಿ ಸಾಹೇಬರು.

ಭಕ್ಷಿ— ಐದು ಸಾವಿರದ ಮನ್ಸಬ್ದಾರರದು ಎರಡನೇ ಪಙ್ತಿ.

ಜಯಸಿಂಹ—ಸರಿ. ಅವರಿಗೆ ತಿಳಿಸಿ (ಎಂದು ಶಿವಾಜಿಗೆ) ಇವರು ದರ್ಬಾರು ಭಕ್ಷಿಗಳು.

ಭಕ್ಷಿ— ಆದಾಬ್.

ಶಿವಾಜಿ— ರಾಂ ರಾಂ.

ಭಕ್ಷಿ— ಐದು ಸಾವಿರದ ಮನ್ಸಬ್‌ದಾರರು ಈ ಪಙ್ತಿಯಲ್ಲಿ ಕುಳಿತು ಕೊಳ್ಳಬೇಕು.

ಶಿವಾಜಿ— (ಮುಂದಣ ಪಙ್ತಿಯನ್ನು ತೋರಿಸಿ) ಇಲ್ಲಿ ಯಾರು ಕುಳಿತುಕೊಳ್ಳ ಬೇಕು?

ಭಕ್ಷಿ— ಕೆಳಗಡೆಗೆ ಹತ್ತು ಸಾವಿರದ ಮನ್ಸಬ್‌ದಾರರು, ಮೇಲಕ್ಕೆ ಇಪ್ಪತ್ತು ಸಾವಿರದವರು.

ಶಿವಾಜಿ— (ಸಿಂಹಾಸನದ ಬಳಿಯ ಪೀಠಗಳನ್ನು ತೋರಿಸಿ) ಅಲ್ಲಿ?

ಭಕ್ಷಿ— ಅಲ್ಲಿ ಜಯಸಿಂಹ ಮಹಾರಾಜರು, ಜಸ್ವಂತಸಿಂಹರು ಮುಂತಾದ ರಾಜರು ಕೂಡುತ್ತಾರೆ.

ಶಿವಾಜಿ— ಸರಿ (ಎಂದು ಜಯಸಿಂಹನ ಬಳಿ ಹೋಗಿ) ಇದೇನು ನಾನು ಕುಳಿತು ಕೊಳ್ಳಬೇಕಾದ ಸ್ಥಳ ಹೇಳುವ ರೀತಿಯೊ?

ಜಯಸಿಂಹ—ಎಲ್ಲಿ ಕುಳಿತರೆ ಏನು ಶಿವಾಜಿ ಮಹಾರಾಜ್. ಈ ಹೊತ್ತು ತಾವು ಸುಮ್ಮನಿರಿ. ಎಲ್ಲವೂ ಸರಿಹೋಗುತ್ತದೆ. (ಜಯಸಿಂಹನ ಮಗ ರಾಮಸಿಂಹನು ಬರುವನು) ಇವರು ನಮ್ಮ ಕುಮಾರ ರಾಮ ಸಿಂಹ.

ಶಿವಾಜಿ— ರಾಂ ರಾಂ. ರಾಮಸಿಂಹ ಮಹಾರಾಜರೆ.

ರಾಮಸಿಂಹ—ರಾಂ ರಾಂ. ನಿಮ್ಮ ಹೆಸರನ್ನು ಕೇಳಿದ್ದೆವು. ಈ ದಿನ ತಮ್ಮನ್ನು ನೋಡುವ ಪುಣ್ಯ ಲಭಿಸಿತು.

ಶಿವಾಜಿ— ಪುಣ್ಯ ನನ್ನದು. ಇಂಥಾ ಹೊಸ ಸ್ಥಳದಲ್ಲಿ ನಮ್ಮ ಹೆಸರು ಕೇಳಿರುವ ಜನ ಇದ್ದರೆ ನಮಗೆ ಎಷ್ಟೋ ಸಂತೋಷ. ತಾವು ಎಲ್ಲಿ ಕೂಡತಕ್ಕವರು! ತಮ್ಮ ತಂದೆಯವರ ಜೊತೆಗೊ?

ರಾಮಸಿಂಹ—ನಾನು ಎಲ್ಲಿ ಕುಳಿತರೂ ಕುಳಿತೆ.

ಭಕ್ಷಿ— ಚಕ್ರವರ್ತಿಗಳು ದಯಮಾಡಿಸುತ್ತಾ ಇದಾರೆ. ಎಲ್ಲರೂ ಪೀಠಗಳಿಗೆ ದಯಮಾಡಿಸಬೇಕು.

ಶಿವಾಜಿ— ಇಲ್ಲಿ ವಂದಿಗಳು ಭಟ್ಟರು ಕೂಗುವುದಿಲ್ಲವೋ?

ರಾಮಸಿಂಹ—ಇಲ್ಲ; ಬಾದಷಹರು ದೇವರ ಸೇವಕರಂತೆ; ನಮಗೇಕೆ ಈ ಪಟಾಟೋಪ ಎನ್ನುತ್ತಾರೆ. (ಎಂದು ಒಂದು ಪೀಠದ ಕಡೆ ಹೊರಡು ವನು. ಎಲ್ಲರೂ ಪೀಠಗಳಿಗೆ ಹೋಗುವರು. ಶಿವಾಜಿ ರಾಮಸಿಂಹನೊಂದಿಗೆ ಹೋಗಿ ಇಪ್ಪತ್ತು ಸಾವಿರದ ಮನ್ಸಬ್‌ದಾರರ ಸ್ಥಳದಲ್ಲಿ ನಿಂತುಕೊಳ್ಳು ವನು. ಭಕ್ಷಿ ಹತ್ತಿರ ಬಂದು)

ಭಕ್ಷಿ— (ಶಿವಾಜಿಗೆ) ತಾವು ಹಿಂದಣ ಪಙ್ತಿಯಲ್ಲಿ ಕುಳಿತುಕೊಳ್ಳ ಬೇಕು. (ಶಿವಾಜಿ ಕೇಳಿಸದಂತೆ ಸುಮ್ಮನೆ ಇರುತ್ತಾನೆ) ತಮ್ಮ ಸ್ಥಳ ಅಲ್ಲಿ.

ಶಿವಾಜಿ— ನಾನು ಇಲ್ಲೇ ಇರುತ್ತೇನೆ.

ಭಕ್ಷಿ— ಹಾಗಾಗದು. ಬಾವಂದರವರ ಅಪ್ಪಣೆ ಆಗಿದೆ. ಅದನ್ನು ತಪ್ಪಿ ನಡೆದರೆ ನನ್ನ ತಲೆ ಹೋದೀತು. (ಶಿವಾಜಿ ಕೇಳಿಸದವನಂತೆ ಸುಮ್ಮನೆ ನಿಂತಿರುವನು. ಇಷ್ಟು ಹೊತ್ತಿಗೆ ಬಾದಷಹನು ಬಂದು ಪೀಠದ ಬಳಿ ನಿಂತು ಎಲ್ಲವನ್ನೂ ಸುಮ್ಮನೆ ನೋಡುತ್ತಿರುತ್ತಾನೆ. ಭಕ್ಷಿ ಪುನಃ) ಸ್ವಾಮಿ ದಯಮಾಡಬೇಕು.

ಶಿವಾಜಿ— ನಾನು ಎಲ್ಲಿ ಕೂಡುವುದು ಎನ್ನುವುದನ್ನ ರಾಜಾ ಜಯ ಸಿಂಹರು ಹೇಳಲಿ.

ಭಕ್ಷಿ— (ಬಾದಷಹನು ಬಂದದ್ದನ್ನು ಕಂಡು) ಸ್ವಾಮಿ, ಬಾದಷಹರು ದಯ ಮಾಡಿದಾರೆ. ಇಲ್ಲಿ ಬನ್ನಿ (ಎಂದು ಶಿವಾಜಿಯ ಕೈಯನ್ನು ಹಿಡಿದು ಕರೆದುಕೊಂಡು ಹೋಗಲು ಪ್ರಯತ್ನ ಮಾಡುವನು.)

ಶಿವಾಜಿ— (ಕೈ ಒದರಿ ಬಿಡಿಸಿಕೊಂಡು) ನನ್ನ ಮೇಲೆ ಕೈ ಹಾಕೀರಿ ಜೋಕೆ. ಏನಿದ್ದರೂ ಬಾಯಲ್ಲಿ ಹೇಳಬೇಕು. (ಎಂದು ಸಿಡಿಮಿಡಿ ಗೊಳ್ಳುತ್ತಾನೆ. ಒದರುವುದರಲ್ಲಿ ಕೈ ಭಕ್ಷಿಯ ಮುಖಕ್ಕೆ ತಗಲುತ್ತದೆ. ಜಯಸಿಂಹ, ಜಸವಂತಸಿಂಹ ಮುಂತಾದವರು ಉಷ್ ಉಷ್ ಎನ್ನುವರು. ಶಿವಾಜಿ ಕೋಪದಿಂದ ಸುತ್ತ ನೋಡುವನು. ಭಕ್ಷಿ ಬಾದಷಹನಿಗೆ ಸಲಾಂ ಹಾಕಿ ಸುಮ್ಮನೆ ನೋಡುತ್ತಿರುವನು.)

ಬಾದಷಹ—(ಕೋಪವನ್ನು ತೋರಿ) ಏನಿದು ಜಯಸಿಂಹ ಮಹಾರಾಜ್.

ಜಯಸಿಂಹ—ವಿಚಾರಿಸಬೇಕು, ಜಹಾಪನಾ.

ಬಾದಷಹ—ಇದು ಯಾರು ?

ಜಯಸಿಂಹ—ಇವರು ಮಹಾರಾಷ್ಟ್ರದ ಶಿವಾಜಿ ರಾಜರು.

ಬಾದಷಹ—ಯಾವ ಸ್ಥಳ ಏರ್ಪಾಡಾಗಿತ್ತು ?

ಜಯಸಿಂಹ—ಭಕ್ಷಿಯವರು ಬಲ್ಲರು.

ಬಾದಷಹ—ಹಿಂದೂ ದರ್ಬಾರಿಗಳ ಮರ್ಯಾದೆಗಳನ್ನು ತಾವು ನೋಡಿಕೊಳ್ಳ ಬೇಕೆಂದು ಹೇಳಿದೆಯಷ್ಟೆ (ಎಂದು ಕುಳಿತುಕೊಳ್ಳುವನು).

ಜಯಸಿಂಹ—ಈ ದಿನ ಇದನ್ನು ಇತರರ ಮುಖಾಂತರ ನಡೆಯಿಸಬೇಕೆಂದು ನಾನು ಅರಿಕೆ ಮಾಡಿಕೊಂಡಿದೇನೆ.

ಬಾದಷಹ—ಆಗಬಹುದು. ರಾಮಸಿಂಹ ಮಹಾರಾಜರೆ, ತಾವು ನೋಡಿ. (ರಾಮಸಿಂಹನು ಹೋಗಿ ಶಿವಾಜಿಗೆ ಸಮಾಧಾನ ಹೇಳುವನು. ಅವನು ಕೇಳುವುದಿಲ್ಲ.)

ರಾಮಸಿಂಹ—(ಹಿಂದಕ್ಕೆ ಬಂದು) ಮಹಾಸ್ವಾಮಿ, ಅವರು ಸನ್ನಿಧಾನದಲ್ಲಿ ಏನೋ ಅರಿಕೆ ಮಾಡಬೇಕಾಗಿದೆಯಂತೆ, ಅದನ್ನು ಕೇಳಬೇಕು ಎಂದು ಪ್ರಾರ್ಥಿಸುತ್ತಾರೆ.

ಬಾದಷಹ—ನಮ್ಮ ದರಬಾರಿನಲ್ಲಿ ನಮ್ಮ ಇಷ್ಟದಂತೆ ನಡೆಯಬೇಕು. ಇಲ್ಲದಿದ್ದರೆ ನಾವು ಯಾವ ಮಾತನ್ನೂ ಕೇಳುವುದಿಲ್ಲ.

ಶಿವಾಜಿ— (ತಾನು ನಿಂತಿದ್ದ ಸ್ಥಳವನ್ನು ಬಿಟ್ಟು ಎಲ್ಲಕ್ಕಿಂತ ಕಡೆಯ ಸ್ಥಳಕ್ಕೆ ಹೋಗಿ ನಿಂತು) ನಾನು ಹೇಳಬೇಕಾದದ್ದನ್ನು ಈಗ ಹೇಳುತ್ತೇನೆ. ಬಾದಷಹರು ಕೇಳೋಣವಾಗುತ್ತೊ?

ಬಾದಷಹ—ಕೇಳುತ್ತೇನೆ. ಎಚ್ಚರಿಕೆಯಿಂದ ಮಾತನಾಡಬೇಕು.

ಜಯಸಿಂಹ—(ಹತ್ತಿರ ಬಂದು ಶಿವಾಜಿಗೆ) ಸ್ವಲ್ಪ ಸಮಾಧಾನವಾಗಿರಿ. ಇಷ್ಟು ಹಗರಣ ಆದಮೇಲೆ ಇಲ್ಲಿ ಬರುವುದಕ್ಕೆ ಬದಲಾಗಿ ಆಗಲೇ ಬಂದಿದ್ದರೆ ಎಷ್ಟು ಚೆನ್ನಾಗಿತ್ತು! ಎಲ್ಲ ಸರಿಹೋಗುತ್ತದೆ. ಸ್ವಲ್ಪ ತಾಳ್ಮೆಯಿಂದಿರಿ.

ಶಿವಾಜಿ— (ಅವನಿಗೆ ಗಟ್ಟಿಯಾಗಿ) ಮಹಾರಾಜಾ, ನಾನು ತಾಳ್ಮೆಯಿಂದಿದ್ದು ರಾಜಪದವಿಯನ್ನು ಸಂಪಾದಿಸಬೇಕೆಂಬ ಆಶೆ ಈಗ ನನಗೆ ಇಲ್ಲ. ತಾವು ನನ್ನನ್ನು ಕ್ಷಮಿಸಿ ತಮ್ಮ ಪೀಠವನ್ನು ಅಲಂಕರಿಸಿ. ನಾನು ಅರಿಕೆ ಮಾಡುವುದನ್ನು ಮಾಡಿ ಹೋಗುತ್ತೇನೆ.

ಬಾದಷಹ—ತಾವು ದಯಮಾಡಿ, ಜಯಸಿಂಹ ಮಹಾರಾಜರೆ. ಏನು ಹೇಳುತ್ತಾನೋ ಹೇಳಲಿ.

ಶಿವಾಜಿ— ಬಾದಷಹ, ತಾವು ದೊಡ್ಡವರು. ನನ್ನನ್ನು ಅವನು ಇವನು ಎಂದು ಇಷ್ಟು ಜನದಲ್ಲಿ ಹೇಳುವುದರಿಂದ ತಮ್ಮ ಗೌರವಕ್ಕೆ ಕಡಿಮೆ. ಇದರಿಂದ ನನಗೆ ಏನೂ ಕಡಿಮೆಯಾಗುವುದಿಲ್ಲ. ಇದನ್ನು ನಾನು ಮೊದಲು ವಿಜ್ಞಾಪಿಸಿಕೊಳ್ಳಬೇಕು. ಇನ್ನು ನಿಮ್ಮನ್ನು ನಾನು ಎರಡು ಮಾತು ಮಾತ್ರ ಕೇಳುತ್ತೇನೆ. ನನಗೆ ನೀವು ಜಯಸಿಂಹ ಮಹಾರಾಜರ ಕೈಯಲ್ಲಿ ಏನೆಂದು

ಹೇಳಿಕಳುಹಿಸಿದಿರಿ? ಆ ಮಾತಿಗೆ ಈಗ ಏನು ಹೇಳುತ್ತೀರಿ? ಒಂದು ತಿಂಗಳು ನನ್ನನ್ನು ಕಾಯಿಸಿ, ನನ್ನ ಬಳಿಗೆ ನಿನ್ನೆ ವೇಷದಲ್ಲಿ ಏಕೆ ಬಂದಿರಿ? ಒಂದು ಮಾತು ಆಡಿ ನನ್ನನ್ನು ಇಲ್ಲಿಗೆ ಕರೆಯಿಸಿ ಆಡಿದ ಮಾತಿನಂತೆ ಈಗ ನಡೆಸದ್ದು ಯಾಕೆ? ಇದನ್ನು ದಯಮಾಡಿ ತಿಳಿಸಬೇಕು.

ಬಾದಷಹ—ಜಯಸಿಂಹ ಮಹಾರಾಜರ ಕೈಯಲ್ಲಿ ಹೇಳಿಕಳುಹಿಸಿದಮೇಲೆ ಸೂರತ್ತಿನ ಲೂಟಿಯಲ್ಲಿ ಫರಂಗಿಯವರಿಗೆ ಆದ ತೊಂದರೆಯ ವಿಷಯ, ಕಲ್ಯಾಣದ ಮುತ್ತಿಗೆಯಲ್ಲಿ ನಡೆದ ಅತ್ಯಾಚಾರದ ವಿಷಯ ಫಿರ್ಯಾದು ಬಂದಿದೆ.

ಶಿವಾಜಿ— ಏನೆಂದು ಫಿರ್ಯಾದು? ಸೂರತ್ತಿನಲ್ಲಿ ನಾನು ಫರಂಗಿಯವರಿಗೆ ತೊಂದರೆ ಮಾಡಿರುವುದು ಸುಳ್ಳು. ಯಾವ ಫರಂಗಿ ಬಂದು ಹೇಳುತ್ತಾನೋ ಹೇಳಲಿ. ಕಲ್ಯಾಣದಲ್ಲಿ ಅತ್ಯಾಚಾರ ನಡೆಯಿತೆಂದು ಯಾವ ಮುಖಂಡನೂ ಹೇಳಲಾರ. ಬರಲಿ ಫಿರ್ಯಾದು ಮಾಡುವವರು. ನಿಮಗೂ ಇದಕ್ಕೂ ಸಂಬಂಧ ಏದೆ ಎಂತ ನಾನು ಒಪ್ಪುವುದಿಲ್ಲ. ಆದರೂ ದೂರು ಕೇಳಿರುವ ನಿಮ್ಮ ಮುಂದೆ ಆ ದೂರು ಸುಳ್ಳು ಎಂತ ತೋರಿಸುತ್ತೇನೆ. ಯಾರು ಫಿರ್ಯಾದು ಮಾಡಿರುವರು?

ಬಾದಷಹ—(ಭಕ್ಷಿಗೆ) ಕಾಸೀಂಖಾನನನ್ನು ಕರೆ.

ಭಕ್ಷಿ— ಅಪ್ಪಣೆ. (ಹೋಗಿ ಮರೆಯಲ್ಲಿ ನಿಂತಿದ್ದ ಕಾಸೀಂಖಾನನನ್ನು ಒಡನೆಯೇ ಕರೆದುಕೊಂಡು ಬರುವನು.)

ಬಾದಷಹ—ಕಾಸೀಂಖಾನರೆ, ಕಲ್ಯಾಣದಲ್ಲಿ ಇವರ ಕಡೆ ಜನರು ನಡೆಸಿದ ಅತ್ಯಾಚಾರವನ್ನು ವಿವರಿಸಿ.

ಶಿವಾಜಿ— ಕಾಸೀಂಖಾನ್, ಸರಿಯಾದ ಮಾತನ್ನಾಡಿ.

(ಕಾಸೀಂ ಮಾತನಾಡುವುದಿಲ್ಲ; ಭಯದಿಂದ ಇತ್ತ ಅತ್ತ ನೋಡುತ್ತಾನೆ.)

ಬಾದಷಹ—ಕಾಸೀಂಖಾನ್, ಇವರು ಕೊರಾನನ್ನು ತಿಪ್ಪೆಯ ಮೇಲೆ ಇರಿಸಿದರು, ಮಸೀದಿ ಕೆಡಿಸಿದರು, ಮುಸಲ್ಮಾನರ ಹೆಂಗಸರನ್ನು ಇಷ್ಟಬಂದವರಿಗೆ ಕೊಟ್ಟರು ಎಂದು ಹೇಳಿದಿರಲ್ಲಾ.

ಕಾಸೀಂ— ಖುದಾವಂದ್ . . . . (ಎಂದು ಮುಂದಕ್ಕೆ ಹೇಳದೆ ಸುಮ್ಮನೆ ಇರುವನು.)

ಶಿವಾಜಿ— ಹೇಳಲಿ. ಹೇಗೆ ಬಾಯಿ ಬರುತ್ತದೆಯೋ ನೋಡೋಣ. ಇನ್ನೂ ಮುಸಲ್ಮಾನರಾದ ನೀವು ಹಿಂದೂಗಳ ದೇವಾಲಯ ಗಳನ್ನು ಹಾಳುಮಾಡಿದಿರಿ, ಹಿಂದೂ ಹೆಂಗಸರನ್ನು ಕೆಡಿಸಿದಿರಿ, ನಮ್ಮ ಗ್ರಂಥಗಳನ್ನು ಸುಡಿಸಿದಿರಿ. ನಮಗೆ ಇಂಥ ಅವಿವೇಕ ವಿಲ್ಲ. ನಾನು ಕೊರಾನು ಸಿಕ್ಕಿದರೆ ನನ್ನ ಮುಸಲ್ಮಾನ್ ಪ್ರಜೆಗಳಿಗೆ ಕೊಟ್ಟಿದೇನೆ. ಮಸೀದಿಯಲ್ಲಿ ಪೂಜೆಗಳನ್ನು ಮಾಡಿಸಿದ್ದೇನೆ. ಮುಸಲ್ಮಾನ ಹೆಂಗಸರನ್ನು ನನ್ನ ತಾಯಿ ತಂಗಿಯರಂತೆ ಕಂಡಿದೇನೆ. ನನ್ನ ಜನರಾದರೂ ಹಾಗೆಯೇ ನಡೆಯುತ್ತಾರೆ. ಅಥವಾ ನನಗೆ ತಿಳಿಯದೆ ಯಾರಾದರೂ ತಪ್ಪುಮಾಡಿದ್ದರೆ, ನನಗೆ ಫಿರ್ಯಾದು ಬಂದೊಡನೆ ವಿಚಾರಿಸಿ ಅವರಿಗೆ ಶಿಕ್ಷೆ ಮಾಡಿದೇನೆ. ಹೌದೇ ಕಾಸೀಂ ಖಾನರೆ.

ಕಾಸೀಂ— ಖುದಾವಂದ್, ನನಗೆ ದೇಹದಲ್ಲಿ ಸರಿಯಾಗಿಲ್ಲ. ನಾಳೆ ಬಂದು ಅರಿಕೆ ಮಾಡುತ್ತೇನೆ.

ಬಾದಷಹ—ಆಗಬಹುದು. (ಎಂದು ಜಯಸಿಂಹನನ್ನು ಕುರಿತು) ಮಹಾರಾಜರೆ, ಇದುವರೆಗೆ ನಮ್ಮ ದರ್ಬಾರಿನಲ್ಲಿ ಇಷ್ಟು ಗರ್ವದಿಂದ ಯಾರೂ ನಡೆದುಕೊಂಡದ್ದಿಲ್ಲ. ಇನ್ನು ಹೀಗಾಗಬಾರದು. ಈ ವಿಚಾರ ನೋಡಿಕೊಳ್ಳಿ. ಕಾಸೀಂ ಖಾನರಿಗೆ ದೇಹಸ್ಥಿತಿ ಸರಿಹೋದ ಮೇಲೆ ಈ ಫಿರ್ಯಾದನ್ನು ಪುನಃ ವಿಚಾರಿಸುತ್ತೇವೆ.

ಶಿವಾಜಿ— ತಾವು ವಿಚಾರಿಸಬಹುದು. ನಾನು ಇಲ್ಲಿ ತಿರುಗಿ ಬರುವು ದಿಲ್ಲ. ಇಂದು ಇಲ್ಲಿಗೆ ಬಂದು ಪಡೆದ ಅವಮರ್ಯಾದೆ ಸಾಕಾ ಗಿದೆ. (ಎಂದು ಜಯಸಿಂಹನಿಗೆ, ರಾಮಸಿಂಹನಿಗೆ) ಮಹಾರಾಜರೆ, ನಾನು ಬರುತ್ತೇನೆ. ರಾಂ ರಾಂ. (ಎಂದು ಹೊರಟುಹೋಗುವನು. ಎಲ್ಲರೂ ಆಶ್ಚರ್ಯದಿಂದ ಅವನ ಕಡೆ ನೋಡುತ್ತಿರುವರು. ಪರದೆ ಬೀಳುವುದು.)

---

# ಅಂಕ ೪

## ಸ್ಥಾನ ೧

ಶಿವಾಜಿಯ ಬಿಡಾರ. ಪಿಂಗಳೆ, ಮುಲಾನಾ ಬರುತ್ತಾರೆ.

ಪಿಂಗಳೆ— ಇದು ಎಂಥ ಜ್ವರವೆಸ್ನುತ್ತೀರಿ. ಒಂದೂವರೆ ತಿಂಗಳಾಯಿತಲ್ಲ. ಯಾರಾದರೂ ವಿಷವಿಕ್ಕಿದರೋ ?

ಮುಲಾನಾ—ಇದು ಅನೇಕರಿಗೆ ಬರುವುದುಂಟು. ಸ್ಥಳಬಿಟ್ಟುಬಂದು ಇಲ್ಲಿ ಆಗದವರ ಕೈಗೆ ಸಿಕ್ಕಿದ್ದು, ಆಸ್ಥಾನದಲ್ಲಿ ರೇಗಿದ್ದು, ಬಾದಷಹರು ಊರಿಗೆ ಹೋಗುವುದಕ್ಕೆ ಬಿಡುವುದಿಲ್ಲ ಎಂದದ್ದು, ಇವರು ಸೆರೆಮನೆಯಲ್ಲಿರುವಂತೆ ಪಹರೆಯಲ್ಲಿ ಸಿಕ್ಕಿದ್ದು—ಇದರಿಂದೆಲ್ಲಾ ರಾಜರ ಮೈಗೆ ಮನಸ್ಸಿಗೆ ಅಲಸಿಕೆಯಾಗಿ ಕಾಯಿಲೆ ಮಲಗಿದರು.

ಪಿಂಗಳೆ— ಅಂತೂ ಈಗ ಗುಣಮುಖವಾಯಿತಲ್ಲಾ. ಇನ್ನು ಚಿಂತೆ ಇಲ್ಲವೊ?

ಮುಲಾನಾ—ದೇವರ ಕೃಪೆಯಿಂದ ಗುಣವಾಯಿತು. ಇನ್ನು ಚಿಂತೆಯಿಲ್ಲ.

ಪಿಂಗಳೆ— ಈಸಲ ತಾವು ಬಂದು ವೈದ್ಯಮಾಡದೇ ಇದ್ದಿದ್ದರೆ ಇನ್ನೇನು ತೊಂದರೆಯಾಗುತ್ತಿತ್ತೋ. ತಾವು ಇಲ್ಲಿಗೆ ಬಂದದ್ದೂ ತಮಗೆ ವೈದ್ಯ ತಿಳಿದದ್ದೂ ನಮ್ಮ ಪುಣ್ಯ.

ಮುಲಾನಾ—ನನ್ನಿಂದ ಇವರಿಗೆ ಸ್ವಲ್ಪ ಸೇವೆಯಾಗಬೇಕೆಂದು ಭಗವಂತನ ಇಚ್ಛೆಯಿತ್ತು. ಅದು ನಡೆಯಿತು. ಇದೇ ನನಗೆ ಸಂತೋಷ. (ಬಾಗಿಲಕಡೆ ನೋಡಿ) ಯಾರೋ ಬಂದಹಾಗಿದೆ ತಮ್ಮನ್ನು ನೋಡುವುದಕ್ಕೆ. ನೋಡಿ. ನಾನು ಮಹಾರಾಜರ ಹತ್ತಿರ ಇರುತ್ತೇನೆ. (ಎಂದು ಒಳಗೆ ಹೋಗುವನು.)

ಬೇರೇ ಬಾಗಿಲಿನಿಂದ ತಾನಾಜಿ ಬರುತ್ತಾನೆ.

ತಾನಾಜಿ— ರಾಂ ರಾಂ ಪಂತರೆ.

ಪಿಂಗಳೆ— ಬನ್ನಿ ತಾನಾಜಿ, (ಎಂದು ಆಸೆಯಿಂದ ಬಂದು ಕೈಹಿಡಿದು) ಈಗತಾನೇ ಬಂದಿರಾ. ಎಲ್ಲರೂ ಸೌಖ್ಯವೇ ?

ತಾನಾಜಿ— ಎಲ್ಲಾ ಸೌಖ್ಯ. ಇಲ್ಲಿ ಸೌಖ್ಯವೇ ?

ಪಿಂಗಳೆ— ಭವಾನಿಯ ಕೃಪೆಯಿಂದ ಸೌಖ್ಯ. ಬಹಳ ಕಷ್ಟಕ್ಕೆ ಸಿಕ್ಕಿದ್ದಾಯಿತು.

ತಾನಾಜಿ— ಕಷ್ಟ ಈಗಲೂ ಇದೆಯಲ್ಲ. ಇಲ್ಲಿಂದ ಹೊರಟುಹೋದಾಗ ಲಲ್ಲವೆ ಕಷ್ಟ ತೀರಿತೆನ್ನುವುದು.

ಪಿಂಗಳೆ— ಅದು ಹೇಗಾದರೂ ಆಗುತ್ತೆ ಅಣ್ಣ; ಮಹಾರಾಜರಿಗೆ ಭಗವತಿ ಆರೋಗ್ಯವನ್ನು ಕೊಟ್ಟರೆ ಮಿಕ್ಕದ್ದು ಕಷ್ಟವಲ್ಲ.

ತಾನಾಜಿ— ಅಷ್ಟು ತೊಂದರೆಯಾಗಿತ್ತೆ?

ಪಿಂಗಳೆ— ಬಹಳ ಕಷ್ಟವಾಗಿತ್ತು ತಾನಾಜಿ. ಮೂರುದಿನ ನಾನು ಪಟ್ಟ ಭಯ ದೇವರೇ ಬಲ್ಲ. ಅವರಿಗೆ ಪ್ರಪಂಚ ಮರೆತಿತ್ತು. ಜ್ವರವೋ ವಿಪರೀತ. ಊರಿಗೆ ಏನು ವರ್ತಮಾನ ತೆಗೆದುಕೊಂಡು ಹೋಗುವುದು ನನ್ನ ಹಣೆಯಲ್ಲಿ ಬರೆದಿದೆಯೋ ಎಂದು ನಾನು ಕುಸಿದುಬಿದ್ದೆ.

ತಾನಾಜಿ— ಈಗ ಸೌಖ್ಯವಾಗಿದಾರೆಯೇ? ಹೋಗಿ ನೋಡೋಣವೆ?

ಪಿಂಗಳೆ— ಹೋಗೋಣ. ಇನ್ನೂ ನಾಲ್ಕೈದು ದಿನ ಯಾರೂ ಮಾತ ನಾಡಿಸಕೂಡದೆಂದು ಮುಲಾನಾ ಹೇಳಿದಾರೆ. ನಾವು ಸುಮ್ಮನೆ ನೋಡಿಕೊಂಡು ಬಂದುಬಿಡೋಣ. ಅವರಿಗೂ ಅಷ್ಟೆ ನಾಲ್ಕು ದಿನದವರೆಗೆ ಬಾಯಿ ತೆರೆಯಕೂಡದೆಂದು ಕಟ್ಟುಮಾಡಿದ್ದಾರೆ.

ತಾನಾಜಿ— ಯಾರು ಕಟ್ಟುಮಾಡಿರುವುದು? ಮುಲಾನಾನೇ? ಯಾವ ಮುಲಾನಾ?

ಪಿಂಗಳೆ— ಹೇಳುವುದನ್ನು ಮರೆತೆ. ನಮ್ಮ ಕಲ್ಯಾಣದ ಮುಲಾನಾ ಇರಲಿಲ್ಲವೆ; ಮುದುಕ? ಆತ ಇಲ್ಲಿ ಬಂದರು. ಅವರೇ ಮಹಾರಾಜರಿಗೆ ಔಷಧಿ ಕೊಟ್ಟು ವಾಸಿಮಾಡಿದವರು.

ತಾನಾಜಿ— ಪಂತರೆ, ಏನು ಮಾಡಿದಿರಿ ನೀವು? ಮುಸಲ್ಮಾನ ವೈದ್ಯನ ಕೈಯಲ್ಲಿ ಮಹಾರಾಜರಿಗೆ ಔಷಧಿ ಕೊಡಿಸಿದಿರಾ? ಇಂಥಾ ಅಚಾತುರ್ಯವುಂಟೆ?

ಪಿಂಗಳೆ— ನಾನೂ ಹಾಗೆಯೇ ಎಂದೆ. ಆದರೆ ಮಹಾರಾಜರು ಹಠಮಾಡಿ ದರು. ಅಲ್ಲದೆ ನನ್ನ ಸಂಶಯವನ್ನು ಊಹಿಸಿ, ಮುಲಾನಾ

ನನಗೆ, "ರಾಯರೆ, ನಾನು ವಿಷ ಹಾಕುವುದಕ್ಕೆ ಸಮಯ ದೊರೆಯಲಿ ಎಂತ ವೈದ್ಯಮಾಡುವುದಕ್ಕೆ ಕಲ್ಯಾಣದಿಂದ ಇಲ್ಲಿಗೆ ಬರಲಿಲ್ಲ. ನೀವು ಭಯಪಡಬೇಡಿ. ಔಷಧವನ್ನೆಲ್ಲಾ ನಿಮ್ಮ ಕೈಯಲ್ಲೇ ಮಾಡಿಸುತ್ತೇನೆ. ಮಾಡಿದ್ದರಲ್ಲಿ ಒಂದು ಭಾಗ ನನಗೆ ಕೊಡಿ; ನಿಮ್ಮೆದುರಿಗೆ ಕುಡಿಯುತ್ತೇನೆ. ಉಳಿದದ್ದನ್ನು ಆಮೇಲೆ ಮಹಾರಾಜರಿಗೆ ಕೊಡಿ" ಎಂತ ಹೇಳಿದರು. ಆದರ ಮೇಲೆ ಒಪ್ಪಿಕೊಂಡೆ.

ತಾನಾಜಿ— ದಿನಾ ಅವರಿಗೆ ಔಷಧ ಕುಡಿಸಿ ಆಮೇಲೆ ಮಹಾರಾಜರಿಗೆ ಕೊಟ್ಟಿರಾ?

ಪಿಂಗಳೆ— ಹೌದು. ಜ್ವರ ನಿಂತಮೇಲೆ ಮಹಾರಾಜರು ಇನ್ನುಮೇಲಾದರೂ ಇವರನ್ನು ನಂಬು, ಹೀಗೆ ಅಡ್ಡಿಮಾಡಬೇಡ ಎಂದರು. ಆಗಲಿ ಎಂದೆ. ಆದರೆ ಮುಲಾನಾ, "ಇದು ದೊಡ್ಡ ಜೀವ, ಏನು ಹೆಚ್ಚುಕಡಿಮೆಯಾದರೂ ನನ್ನ ಹೆಸರು ಕೆಟ್ಟೀತು, ನೀವು ಇದುವರೆಗೂ ಸಾಕ್ಷಿಯಿದ್ದಂತೆ ಇನ್ನುಮೇಲೂ ಇರಬೇಕು" ಎಂತ ತಾನೇ ಅರ್ಧ ಕುಡಿದು ಇನ್ನರ್ಧವನ್ನು ರಾಜರಿಗೆ ಕೊಡುತ್ತಿದಾರೆ. ಇವರೇ ಅಲ್ಲ. ಈಸಲ ಯಾರ್ಯಾರೋ ನಮಗೆ ಉಪಕಾರ ಮಾಡಿದವರು. ಬಾದಷಹರವರ ತಂಗಿಯಂತೆ, ಬೇಗಂ ಸಾಹೇಬಾ; ಅವರು ರಾಮಸಿಂಹ ಮಹಾರಾಜರ ಕೈಯಲ್ಲಿ ಹತ್ತುಸಲ ಹೇಳಿಕಳುಹಿಸಿದ್ದರು.

ತಾನಾಜಿ— ಸಂತೋಷ, ರಾಯರೆ. ಹೇಗೋ ಎಲ್ಲಾ ಒಳ್ಳೆಯದಾಯಿತಲ್ಲ. ಮುಲಾನಾ ಏನಾದರೂ ಬಾದಷಹನ ಕಡೆ ಸೇರಿಕೊಂಡು ವಿಷ ಸೇರಿಸಿಬಿಟ್ಟಿದ್ದರೆ ಕೆಲಸ ಕೆಡುತ್ತಿತ್ತು.

ಪಿಂಗಳೆ— ತಾನು ಸಾಯುತೇನೆ ಎಂತ ಭಯವಿಲ್ಲವೆ?

ತಾನಾಜಿ— ನಾನು ಸತ್ತರೆ ಸಾಯುತೇನೆ, ಮುದಿಗೊಡ್ಡು, ಹಿಂದೂಗಳ ಕಡೆ ಈ ಸಿಂಹ ಸಾಯಲಿ ಎಂದಿದ್ದರೆ?

ಪಿಂಗಳೆ— ನಿಜವಾದ ಮಾತು. ಏನೋ ದೇವರ ಕೃಪೆ. ಹಾಗೆ ಏನೂ ಆಗಲಿಲ್ಲ.

ತಾನಾಜಿ— ಮಹಾರಾಜರನ್ನು ಹೋಗಿ ನೋಡೋಣವೆ?

ಪಿಂಗಳೆ— ಬನ್ನಿ ಹೋಗೋಣ. ಇದೇನು ನೀವೇ ಬಂದುಬಿಟ್ಟಿರಿ? ಇನ್ನು ಯಾರನ್ನಾದರೂ ಕಳುಹಿಸಬಾರದಿತ್ತೆ?

ತಾನಾಜಿ— ಕಾವಲಜನ ಹಿಂಪಕ್ಕೆ ಬಂದು ಇವರು ಕಾಯಿಲೆ ಎಂತ ತಿಳಿಸಿದರು. ದೊಡ್ಡ ರಾಣಿಯವರು, ಚಿಕ್ಕರಾಣಿಯವರು ಹೋಗು, ಹೋಗು ಎಂತ ದಿನಾ ನನ್ನ ಪ್ರಾಣ ತೆಗೆದುಬಿಟ್ಟರು. ನನಗೂ ಯೋಚನೆ.

ಪಿಂಗಳೆ— ಅಲ್ಲಿ ಸರಿಯಾದವರು ಇಲ್ಲ ಎನ್ನುವುದು ಹೊರತು ಇಲ್ಲಿಗೆ ತಾವು ಬಂದದ್ದು ಒಳ್ಳೆಯದೇ ಆಯಿತು. ನನಗೂ ಈ ಲಂಕಾ ಪಟ್ಟಣದಲ್ಲಿ ಒಂಟಿಯಾಗಿ ಸಿಕ್ಕಿಕೊಂಡು ನಮ್ಮವರ ಮುಖ ಕಂಡೇನೇ ಎನ್ನುವಹಾಗಾಗಿಹೋಗಿತ್ತು.

ತಾನಾಜಿ— ಹನುಮಂತ ಎಂದುಕೊಂಡಹಾಗೋ (ಎಂದು ನಗುತ್ತಾನೆ. ಪಿಂಗಳೆಯೂ ನಗುತ್ತಾನೆ. ಇಬ್ಬರೂ ಹೋಗುತ್ತಾರೆ.)

---

## ಸ್ಥಾನ ೨

ಹಾಸಿಗೆಯಲ್ಲಿ ದಿಂಬಿಗೆ ಒರಗಿ ಶಿವಾಜಿ, ಹತ್ತಿರ ಮುಲಾನಾ, ಸೇವಕ ಬಾಗಿಲಬಳಿ.

ಶಿವಾಜಿ— ಮುಲಾನಾ ಸಾಹೇಬ.

ಮುಲಾನಾ—ಮಹಾರಾಜ.

ಶಿವಾಜಿ— ನೀವು ನನ್ನನ್ನು ಈಸಲ ಉಳಿಸಿ ಬಹಳ ಉಪಕಾರ ಮಾಡಿದಿರಿ.

ಮುಲಾನಾ—ನಾನು ಮಾಡಿದ ಉಪಕಾರವನ್ನೆಲ್ಲಾ ವರ್ಣಿಸುವುದಕ್ಕೆ ನಿಮಗೆ ಶಕ್ತಿ ಸಾಲದು. ಶಕ್ತಿ ಬರುವವರೆಗೂ ಸುಮ್ಮನೆ ಇರಬೇಕು. ನನ್ನನ್ನು ನೋಡಿ ತಿಳಿದುಕೊಳ್ಳಿ. ನೀವು ಮಾಡಿದ ಉಪಕಾರವನ್ನೂ ಮರ್ಯಾದೆಯನ್ನೂ ವರ್ಣಿಸುವುದಕ್ಕೆ ಶಕ್ತಿಯಿಲ್ಲದ್ದರಿಂದ ನಾನು ಸುಮ್ಮನಿಲ್ಲವೆ?

ಶಿವಾಜಿ— ಎಲ್ಲಿಯ ಮಾತು? (ಎಂದು ಏನೋ ಹೇಳಹೋಗುವನು.)

ಮುಲಾನಾ—(ಅವನ ಬಾಯಿಗೆ ಕೈಯನ್ನಿಟ್ಟು) ತಾವು ಇನ್ನು ನಾಲ್ಕು ದಿನ ಮಾತನಾಡಕೂಡದು. (ಎಂದು ಕೈ ತೆಗೆಯುವನು.)

ಶಿವಾಜಿ— (ಏನೋ ಸ್ವರ ಕಿವಿಗೆ ಬಿದ್ದಂತೆ ಆಲಗಿಸಿ ಕೇಳಿ, ಸನ್ನೆಮಾಡಿ) ತಾನಾಜಿಯ ಧ್ವನಿ! ಬಂದರೋ?

ಮುಲಾನಾ—ಯಾರೋ ಬಂದರು. ನನಗೆ ಹೆಸರು ಗೊತ್ತಿಲ್ಲ. ವಿಚಾರಿಸುತ್ತೇನೆ. (ಎಂದು ಹೊರಗೆ ಹೋಗಿ ಮರಳಿ ಪಿಂಗಳೆ, ತಾನಾಜಿಯೊಂದಿಗೆ ಬರುವನು.)

ತಾನಾಜಿ— (ಬಾಗಿಲಿಂದ ಓಡಿಬಂದು) ಮಹಾರಾಜ್. (ಎಂದು ಕಾಲಿಗೆ ಬೀಳುವನು.)

ಶಿವಾಜಿ— ತಾನಾಜಿ (ಎಂದು ಮುಂದಕ್ಕೆದ್ದು ಅವನ ಕೈಯನ್ನು ಹಿಡಿದುಕೊಂಡು ಮುತ್ತಿಟ್ಟು ಆಯಾಸದಿಂದ ಹಿಂದಕ್ಕೆ ಬೀಳುವನು.)

ಮುಲಾನಾ—ಮಹಾರಾಜ್, ಮಹಾರಾಜ್! ಅಯ್ಯೋ ನನ್ನ ಹಾಳು ವೈದ್ಯವೇ (ಎಂದು ಹೋಗಿ ತಾನಾಜಿಯನ್ನು) ಬನ್ನಿ ಈಚೆಗೆ (ಎಂದು ಎಳೆದು ಒಡನೆ ಒಂದು ಮಾತ್ರೆಯನ್ನು ಸ್ವಲ್ಪ ಅರೆದು ಜೇನುಹಾಕಿ ಕಲಸಿ ತಾನಿಷ್ಟನ್ನು ನೆಕ್ಕಿ ಪಿಂಗಳೆಗೆ) ಅವರಿಗೆ ನೆಕ್ಕಿಸಿ (ಎನ್ನುವನು. ಪಿಂಗಳೆ ಬಂದು ಕೈ ತೊಳೆದುಕೊಂಡು ಔಷಧಿಯನ್ನು ಬೆರಳಲ್ಲಿ ತೆಗೆದುಕೊಂಡು ಶಿವಾಜಿಯ ಬಾಯಿ ತೆರೆದು ನಾಲಿಗೆಗೆ ಹಚ್ಚುವನು.) ಇನ್ನು ನಡೆಯಿರಿ. ಒಂದು ಕ್ಷಣಕ್ಕೆ ಏಳುತ್ತಾರೆ. ಇನ್ನು ನಾಲ್ಕು ದಿನ ಇಲ್ಲಿಗೆ ನಾನು ಯಾರನ್ನೂ ಬಿಡುವುದಿಲ್ಲ. (ಎಂದು ಹೊರಗೆ ಕರೆದುಕೊಂಡು ಹೋಗುವನು.)

---

## ಸ್ಥಾನ ೩

ಅದೇ ಸಾಯಂಕಾಲ. ಬಿಡಾರದಲ್ಲಿ ಪಿಂಗಳೆ ತಾನಾಜಿ ಕುಳಿತಿದಾರೆ. ಮುಲಾನಾ ಒಳಗೆ ಬರುತ್ತಾನೆ.

ತಾನಾಜಿ— ಈಗ ಹೇಗಿದೆ?

ಮುಲಾನಾ—ಸೌಖ್ಯವಾಗಿದಾರೆ. ಏನೂ ಚಿಂತೆಯಿಲ್ಲ. ಆದರೆ ಬೆಳಿಗ್ಗೆ ಬಹಳ ತೊಂದರೆಯಾಗುವುದರಲ್ಲಿತ್ತು. ನೀವು ಅವರಿಗೆ ಅಷ್ಟು ಬೇಕಾದವರು ಎಂತ ತಿಳಿಯಲಿಲ್ಲ. ತಾವಾದರೂ ಹೇಳಬೇಕಾಗಿತ್ತು ರಾಯರೆ.

ಪಿಂಗಳೆ— ನನಗೆ ತೋರಲಿಲ್ಲ.

ತಾನಾಜಿ— ತಪ್ಪು ನನ್ನದು. ಮಹಾರಾಜರವರಿಗೆ ಅವರ ಸೈನ್ಯದವರು ಯಾರೇ ಆದರೂ ಹಾಗೆಯೇ. ಆದರೆ ನಾನು ಮಹಾರಾಜ್ ಎಂತ ಹತ್ತಿರ ಹೋದದ್ದು ಹೆಚ್ಚು ಕೆಲಸವಾಯಿತು. ಕಾಯಿಲೆ ಬಿದ್ದು ಎದ್ದವರು ತಡೆಯಲಾರರು ಎಂತ ನನಗೆ ತಿಳಿಯಬೇಡವೆ?

ಪಿಂಗಳೆ— ಇನ್ನು ಊರಿಂದ ಆಗತಾನೇ ಬಂದವರಿಗೆ, ಮಹಾರಾಜರು ಕಾಯಿಲೆಬಿದ್ದು ಎದ್ದಿದಾರೆ ಎಂತ ಅವರನ್ನು ನೋಡಿ ಮರ್ಯಾದೆ ಯಿಂದ ನಮಸ್ಕಾರಮಾಡಿ ನಿಲ್ಲುವುದಕ್ಕೆ ಸಾಧ್ಯವೆ? ಆಯಿತು. ಈಗ ಎಲ್ಲ ಸರಿಹೋಯಿತಲ್ಲಾ. ಅದೇ ಸಂತೋಷ.

ಮುಲಾನಾ—ರಾಜರು ಒಂದು ಬಾರಿಯಲ್ಲಿ ಉಕ್ಕಿನಂಥ ಮನುಷ್ಯ; ಇನ್ನೊಂದು ಬಾರಿಯಲ್ಲಿ ಬೆಣ್ಣೆ.

ಸೇವಕನೊಬ್ಬನು ಬಾಗಿಲಲ್ಲಿ ನಿಂತು

ಸೇವಕ— ಮಹಾಸ್ವಾಮಿ, ರಾಜಾ ರಾಮಸಿಂಹರು ದಯಮಾಡಿಸಿದ್ದಾರೆ.

ಪಿಂಗಳೆ— (ತಾನಾಜಿಗೆ) ಜಯಸಿಂಹರಾಜರ ಮಕ್ಕಳು. ಬೇಗಂ ಕಳುಹಿಸಿರ ಬೇಕು. (ಎಂದು ಸೇವಕನಿಗೆ) ಒಳಗೆ ಬರಲಿ. ದಯಮಾಡಬೇಕು ರಾಮಸಿಂಹ ಮಹಾರಾಜರೆ.

ಮುಲಾನಾ—ನಾನು ಸ್ವಲ್ಪ ಒಳಗೆ ನೋಡಿಕೊಳ್ಳುತ್ತೇನೆ. (ಎಂದು ಹೋಗುವನು.)

ರಾಮಸಿಂಹ—(ಪ್ರವೇಶಿಸುತ್ತಾ) ನಮಸ್ಕಾರ (ಎಂದು ತಾನಾಜಿಯನ್ನು ನೋಡಿ), ಇವರು ಯಾರು? ಇವರೇಯೋ ಈ ಹೊತ್ತು ಬೆಳಿಗ್ಗೆ ಬಂದವರು?

ಪಿಂಗಳೆ— ಇವರು ನಮ್ಮ ಜೊತೆಯ ದಳಪತಿಗಳು. ತಾನಾಜಿ ಎಂದು ತಾವು ಹೆಸರನ್ನು ಕೇಳಿರಬಹುದು.

ರಾಮಸಿಂಹ—ಕೇಳಿದೇನೆ. ನಮಸ್ಕಾರ ತಾನಾಜಿಯವರೇ. ನಿಮ್ಮನ್ನು ನೋಡಿಯೇ ಶಿವಾಜಿರಾಯರಿಗೆ ಊರ ನೆನಪು ಬಂದು ಹಾಗೆ ಆಯಿತೆಂದು ಕಾಣುತ್ತದೆ. ಅಲ್ಲಿ ಎಲ್ಲರೂ ಸೌಖ್ಯವೋ? ಏನೂ ಹೆದರಿಲ್ಲವಲ್ಲ. (ತಾನಾಜಿ ಮಾತನಾಡದೆ ಉತ್ತರ ಸೂಚಿ ಸುತ್ತಾನೆ) ಸಂತೋಷ. ಈಗ ಹೇಗಿದೆ ಮಹಾರಾಜರಿಗೆ?

ಪಿಂಗಳೆ— ಸೌಖ್ಯವಾಗಿದಾರೆ.

ರಾಮಸಿಂಹ—ಅವರು ಕೇಳಿಕೊಂಡು ಬರಹೇಳಿದರು. ತಮಗೆ ಮೊದಲೇ ಅರಿಕೆ ಮಾಡಿದ್ದೆನಲ್ಲಾ. ಅವರಿಗೆ ಮಹಾರಾಜರನ್ನು ನೋಡ ಬೇಕೆಂದು ಬಹಳ ಆಸೆ. ಇಷ್ಟರಲ್ಲೇ ಬಂದು ನೋಡಬಹು ದೆಂದರೆ ನೋಡುತ್ತಾರಂತೆ.

ಪಿಂಗಳೆ— ಆಗಬಹುದು ಎಂದಾಗ ತಿಳಿಸುತ್ತೇವೆ. ಅಂದು ಅವರು ಬರ ಬಹುದು. ಅವರು ಇಷ್ಟು ವಿಚಾರಿಸಿಕೊಳ್ಳುವುದು ನಮ್ಮ ವಿಷಯದಲ್ಲಿ ಅನುಗ್ರಹಮಾಡಿದ ಹಾಗೆ. ಅವರಿಗೆ ನಮ್ಮ ವಂದನೆಗಳನ್ನು ತಿಳಿಸಬೇಕು.

ರಾಮಸಿಂಹ—ತಿಳಿಸುತ್ತೇನೆ. ನಮ್ಮ ತಂದೆಯವರೂ ಇವರ ವಿಷಯ ಬಹಳ ಯೋಚನೆಯಲ್ಲಿದಾರೆ. ತಮ್ಮ ಮಾತನ್ನು ನಂಬಿ ಇವರು ಇಲ್ಲಿಗೆ ಬಂದು ಹೀಗೆಲ್ಲ ಆಯಿತಲ್ಲಾ ಎಂಬುದೊಂದು ಯೋಚನೆ. ಜೊತೆಗೆ ಇವರು ತಮ್ಮ ಮೇಲೆ ಕೋಪವಾ ಗಿದಾರೆ ಎನ್ನುವುದೊಂದು ಯೋಚನೆ. ಅಂತೂ ಅವರಿಗೆ ಬಹಳ ಚಿಂತೆಯಾಗಿದೆ.

ಪಿಂಗಳೆ— ಹೌದು, ಮಹಾರಾಜರು ಸುಮ್ಮನೆ ಊರಲ್ಲೇ ಇದ್ದಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು.

ರಾಮಸಿಂಹ—ಇನ್ನೊಂದು ಮಾತು ರಾಯರೆ, ನಮ್ಮ ತಂದೆಯವರು ನಮ್ಮಿಂದ ಇಷ್ಟು ಕಷ್ಟ ಉಂಟಾಯಿತು, ಏನಾದರೂ ಮಾಡಿ ಇವರನ್ನು ಕ್ಷೇಮವಾಗಿ ಅವರ ಊರು ಸೇರಿಸುವ ಏರ್ಪಾಡು ಮಾಡು ಎಂದರು. ಇದು ನಮ್ಮ ಕರ್ತವ್ಯ. ನಾನು ಬೇಕಾದ ಸಹಾಯ ಮಾಡುತ್ತೇನೆ. ಇವರಿಗೆ ಪ್ರಯಾಣಕ್ಕೆ ತ್ರಾಣ ಬಂದೊಡನೆಯೇ ಏನಾದರೂ ಉಪಾಯಮಾಡಿ ಇಲ್ಲಿಂದ ಹೊರಟು ಬಿಡಬೇಕು. ಇಲ್ಲಿ ಇದ್ದಷ್ಟೂ ಅಪಾಯ ಹೆಚ್ಚು. ಇಲ್ಲಿಯ ಪಾಪಿಗಳು ಏನು ಮಾಡುವುದಕ್ಕೂ ಹೇಸುವುದಿಲ್ಲ.

ಪಿಂಗಳೆ— ತಾವು ತಿಳಿದವರು.

ರಾಮಸಿಂಹ—ನನ್ನ ಮಾತಿಗೆ ಏನು ಹೇಳುತ್ತೀರಿ.

ಪಿಂಗಳೆ— ನಮ್ಮ ಮಹಾರಾಜರಿಗೆ ಆರೋಗ್ಯವಾಗಲಿ. ಅವರನ್ನು ಕೇಳಿ ಎಲ್ಲಾ ಏರ್ಪಾಡುಮಾಡುತ್ತೇವೆ. ಆಗ್ಯೆ ತಮ್ಮ ಸಹಾಯ ಬೇಕಾದರೆ ಕೇಳುತ್ತೇವೆ. ಬಾದಷಹರೇ ನಾವು ಹೋಗುವ ವಿಷಯದಲ್ಲಿ ಅಡ್ಡಿಮಾಡಲಾರರೆಂದು ನಾನು ತಿಳಿದುಕೊಂಡಿದೇನೆ.

ರಾಮಸಿಂಹ—ಹಾಗಾದರೆ ಇನ್ನೂ ಸಂತೋಷ. ತಾನಾಜಿಯವರು ಈ ವಿಷಯ ಇಲ್ಲಿ ಯಾರ ಹತ್ತಿರಲೂ ಮಾತೆತ್ತಕೂಡದು.

ಪಿಂಗಳೆ— ತಾನಾಜಿಯವರು ಬಾಯಿ ತೆಗೆಯಬೇಕಾಗುತ್ತೆ ಎಂತ ಇತರ ರೆದುರಿಗೆ ಊಟ ಕೂಡ ಮಾಡುವುದಿಲ್ಲ. ಈ ಮಾತನ್ನು ಯಾರಿಗೆ ಹೇಳುವುದಕ್ಕೆ ಹೋಗುತ್ತಾರೆ.

ರಾಮಸಿಂಹ—ಬೇಗಂರವರು ಬೇಗನೆ ಬಂದು ನಿಮ್ಮ ರಾಜರನ್ನು ನೋಡಿದರೆ ಒಳ್ಳೆಯದು. ಆಕೆಯ ಅಣ್ಣ ಅವರ ಮಾತು ಸ್ವಲ್ಪ ಕೇಳುತ್ತಾರೆ. ಆಕೆಯಿಂದ ಏನು ಸಹಾಯವಾಗಬಹುದೋ ಅದನ್ನು ನೋಡ ಬಹುದು. ಸಾಧ್ಯವಾದಷ್ಟು ಶೀಘ್ರದಲ್ಲಿ ಅವರು ಬರುವುದಕ್ಕೆ ಅವಕಾಶಕೊಡಿ.

ಪಿಂಗಳೆ— ಅಗತ್ಯವಾಗಿ.

ರಾಮಸಿಂಹ—ಹಗಲು ಬರುವುದಕ್ಕಾಗುವುದಿಲ್ಲ. ರಾತ್ರಿ ಎಲ್ಲಾ ಮಲಗಿದ ಮೇಲೆ ಬರಬೇಕು. (ಒಂದು ಕ್ಷಣ ಬಿಟ್ಟು) ನಾನು ಹೊರಡು ತ್ತೇನೆ. (ಎಂದು ಹೊರಡುತ್ತಾನೆ. ಪಿಂಗಳೆ ಎದ್ದು ಜೊತೆಯಲ್ಲಿ ಬಾಗಿಲ ವರೆಗೆ ಹೋಗಿ ಬರುತ್ತಾನೆ.)

ತಾನಾಜಿ— ಈತ ನಮಗೆ ಸಹಾಯ ಮಾಡಬೇಕು ಎನ್ನುವುದು ನಿಜವೋ?

ಪಿಂಗಳೆ— ಹೇಗೆ ಹೇಳುವುದು?

ತಾನಾಜಿ— ತಂದೆ ಒಂದುಸಲ ಮೋಸಮಾಡಿದ. ಈ ಮಗನಿಂದ ಇನ್ನೊಂದು ಸಲ ಮೋಸವಾದೀತು.

ಪಿಂಗಳೆ— ನೋಡಿಕೊಳ್ಳಬೇಕು.

ತಾನಾಜಿ— ಇವರು ಆಕೆ, ಆಕೆ ಎಂದದ್ದು ಬಾದಷಹನ ತಂಗಿ ಬೇಗಂ ಮಾತು.

ಪಿಂಗಳೆ— ಹೌದು. ಬೆಳಿಗ್ಗೆ ಹೇಳಿದೆನಲ್ಲಾ. ದಿನಾ ಪಹರೆಯವರ ಮುಖಾಂತರ ಇಲ್ಲಿ ಆಗುವುದನ್ನೆಲ್ಲ ತಿಳಿದುಕೊಳ್ಳುತ್ತಾರೆ;

ವಿಚಾರಿಸುತ್ತಿದಾರೆ. ಒಟ್ಟಿನಲ್ಲಿ ಆಕೆ ನಮ್ಮಮೇಲೆ ಕನಿಕರ ವನ್ನೇ ತೋರಿಸಿದಾರೆ. ಆದರಿಂದಲೇ ಪಹರೆಯವರು ನಮ್ಮ ವಿಷಯದಲ್ಲಿ ಮರ್ಯಾದೆಯಿಂದ ನಡೆದುಕೊಳ್ಳುತ್ತಿರುವುದು. ಇಲ್ಲದಿದ್ದರೆ ಇದು ಬಂದೀಖಾನೆಯಾಗುತ್ತಿತ್ತು.

ತಾನಾಜಿ— ಅದರಲ್ಲಿ ಏನು ಕೃತ್ರಿಮವೋ?

ಪಿಂಗಳೆ— ಹೇಗೆ ಹೇಳುವುದು? ಹಾವಿನ ಊರು. ಎಚ್ಚರಿಕೆಯಿಂದಿರಬೇಕು.

ತಾನಾಜಿ— ಇದೇನು ರಾಯರೆ, ಬಲೆಗೆ ಸಿಕ್ಕಿದ ಸಿಂಹದ ಪಾಡಾಯಿತಲ್ಲ ರಾಜರ ಪಾಡು.

ಪಿಂಗಳೆ— ಹೌದು. ಏನು ಮಾಡೋಣ?

ತಾನಾಜಿ— ಅಂಬಾಭವಾನಿ ಕಾಪಾಡಬೇಕು.

ಪಿಂಗಳೆ— ಕಾಪಾಡುತಾಳೆ ತಾನಾಜಿ. ಅದರಲ್ಲಿ ಸಂದೇಹವಿಲ್ಲ. ಬನ್ನಿ, ರಾಜರನ್ನು ನೋಡೋಣ.

---

## ಸ್ಥಾನ ೪

ಅದೇ ಬಿಡಾರ. ನಾಲ್ಕು ದಿನದ ಮೇಲೆ ಒಂದು ರಾತ್ರಿ. ಪಿಂಗಳೆ ತಾನಾಜಿ ಮುಲಾನಾ ಇದಾರೆ. ರಾಮಸಿಂಹ, ರೋಷನಾರ ಬರುತ್ತಾರೆ. ಇವರು ಸಲಾಂ ಮಾಡುತ್ತಾರೆ.

ರೋಷನಾರ—ಸಲಾಂ, ಸಲಾಂ. ನೀವು ಪಂತೋಜಿಯವರು. ನೀವು ತಾನಾಜಿಯವರು. ನೀವು ಹಕೀಂ ಮುಲಾನಾ ಸಾಹೇಬರು. ಸರಿ, ಸರಿ. ಈಗ ಹೇಗಿದೆ?

ಮುಲಾನಾ—ಸೌಖ್ಯವಾಗಿದಾರೆ.

ರೋಷನಾರ—ಶಿವಾಜಿರಾಯರು. ಅದು ಸರಿ. ನಿಮಗೆ ಹೇಗಿದೆ?

ಮುಲಾನಾ—ನನಗೇ? ನನಗೇನೂ ಕಾಯಿಲೆಯಾಗಿರಲಿಲ್ಲ.

ರೋಷನಾರ—(ನಗುತ್ತ) ಕಾಯಿಲೆಯಿಲ್ಲದೆ ಔಷಧಿ ತೆಗೆದುಕೊಂಡದ್ದರಿಂದಲೇ ಹೇಗಿದೆ ಎಂತ ಕೇಳಿದೆ. ರೋಗಿಗೆ ಅರ್ಧ ಔಷಧಿಯಂತೆ, ನಿಮಗೆ ಅರ್ಧ ಔಷಧಿಯಂತೆ. ರಾಮಸಿಂಹ ರಾಜರು ಹೇಳಿ ದರು. ಕೇಳಿ ನನಗೆ ಬಹು ನಗು ಬಂತು. ಏನೋ ಜೇನು

ತುಪ್ಪದ ಔಷಧಿಯೆಂದರೆ ಹೇಗಾದರೂ ತೆಗೆದುಕೊಳ್ಳಬಹುದಲ್ಲಾ. ಈ ಕಷಾಯಗಳನ್ನು ಹೇಗೆ ಕುಡಿಯುವುದು, ಹಕೀಮರೆ, ಜ್ವರವಿಲ್ಲದೆ? (ಎಲ್ಲರೂ ನಗುವರು) ಅಂತು ಪಂತರು ಒಳ್ಳೆ ಎಚ್ಚರಿಕೆ ತೆಗೆದುಕೊಂಡರು.

ಪಿಂಗಳೆ— ಏನು ಮಾಡುವುದು ಬೇಗಂ ಸಾಹೇಬಾ. ನಮ್ಮ ರಾಜರಿಗಾಗಿ ನಾವು ಇತರರ ಮನಸ್ಸನ್ನು ನೋಯಿಸಬೇಕಾಗುತ್ತದೆ.

ರೋಷನಾರ—ಮನಸ್ಸು ಮಾತ್ರ ನೋಯಿಸಿದರೆ ಪರವಾಯಿಲ್ಲ. ಈ ಮುದುಕರ ಕೈಯಲ್ಲಿ ಆ ಕಷಾಯಗಳನ್ನೆಲ್ಲಾ ಕುಡಿಸಿ ಅವರ ಹೊಟ್ಟೆ ನೋಯಿಸಿದಿರಲ್ಲಾ. ಎಂಥಾ ಕಠಿಣ ಹೃದಯ ನಿಮ್ಮದು? ಆದರೆ (ರಾಮಸಿಂಹನನ್ನು ಕುರಿತು) ರಾಜಾ ಸಾಹೇಬ್, ನಮ್ಮ ಅಣ್ಣನಿಗೆ ಇಂಥಾ ಸೇವಕರು ಇಬ್ಬರು ಇದ್ದರೆ ಮೊಗಲಾಯಿ ದೌಲತ್ತಿಗೆ ಚ್ಯುತಿಯಿಲ್ಲ ಅಲ್ಲವೆ?

ಮುಲಾನಾ—ಅದು ಸೇವಕರಲ್ಲಿ ಮಾತ್ರ ಇರುವ ಗುಣ ಅಲ್ಲ, ಬೇಗಂ ಸಾಹೇಬಾ. ನಿಮ್ಮ ಅಣ್ಣನವರು ಶಿವಾಜಿ ರಾಜರಂತೆ ಇದ್ದಿದ್ದರೆ ಅವರಿಗೆ ಇವರಂತೆ ಸೇವಕರು ಇರುತ್ತಿದ್ದರು.

ರೋಷನಾರ—(ಅವನನ್ನು ಕೋಪದಿಂದ ನೋಡಿ ಮತ್ತೆ ಸಮಾಧಾನವಾಗಿ) ಹೌದು, ನೀವು ಹೇಳುವುದು ನಿಜ. ಎಂದು (ಒಂದು ಕ್ಷಣ ಬಿಟ್ಟು) ರಾಜರನ್ನು ನೋಡೋಣವೆ?

ಮುಲಾನಾ—ತಮಗೆ ಹೇಳಿಕಳುಹಿಸಿದಾಗ ಅವರು ಎಚ್ಚರವಾಗಿದ್ದರು. ತಾವು ಬರುವುದು ಸಾವಕಾಶವಾಯಿತು. ಅವರಿಗೆ ಒಂದು ನಿದ್ರೆಯ ಔಷಧಿ ಕೊಟ್ಟೆ. ಈಗ ಸ್ವಲ್ಪ ನಿದ್ರೆ ಬಂದಂತಾಗಿದೆ.

ರೋಷನಾರ—ಎಂದರೆ ಈಗ ನೋಡಲಾಗದು ಎಂತಲೆ?

ಮುಲಾನಾ—ಹೌದು. ಅವರಿಗೆ ನಿದ್ರೆ ಕೆಡಬಾರದು. ಮಾಫ್ ಮಾಡಿ ಇನ್ನೊಂದು ದಿನ ಸ್ವಲ್ಪ ಮುಂದಾಗಿ ದಯಮಾಡಿದರೆ ನೋಡಬಹುದು.

ರೋಷನಾರ--ಈಗ ಇಲ್ಲಿಯವರೆಗೆ ಬಂದದ್ದಾಯಿತಲ್ಲ. ಏನು ಮಾಡುವುದು. ತಾವೆಲ್ಲಾ ಹೊರಗೇ ಇರಿ. ನಾನು ಮಾತ್ರ ಅವರನ್ನು ಒಂದು

ಸಲ ನೋಡಿ ಹೊರಗೆ ಬಂದು ಬಿಡುತ್ತೇನೆ. (ಯಾರೂ ಮಾತನಾಡು ವುದಿಲ್ಲ. ಒಬ್ಬರ ಮುಖವನ್ನು ಒಬ್ಬರು ನೋಡುತ್ತಾರೆ.) ಯಾಕೆ ನಾನು ಅವರನ್ನು ಏನಾದರೂ ಮಾಡುತ್ತೇನೆಂದು ಸಂಶಯವೇ?

ಪಿಂಗಳೆ— ಹೌದು, ಬೇಗಂ ಸಾಹೇಬಾ. (ತಾನಾಜಿಯ ಕಡೆ ನೋಡುವನು. ತಾನಾಜಿ ಎಲ್ಲೋ ಹೋದಂತೆ ಹೋಗುವನು.)

ರೋಷನಾರ—ನಿಮ್ಮ ಅಪನಂಬಿಕೆಗೆ ಏನು ಮಿತಿಯೇ ಇಲ್ಲವೆ?

ಪಿಂಗಳೆ— ಇಲ್ಲ, ಬೇಗಂ ಸಾಹೇಬಾ. ಈ ಜೀವ ನಮಗೆ ಬಹಳ ದೊಡ್ಡದು. ಅದಕ್ಕಾಗಿ ಇಷ್ಟು.

ರೋಷನಾರ—ಇಕೋ ಕೇಳಿ. ನಾನು ನಿಮಗೆ ಒಳ್ಳೆಯದನ್ನು ಮಾಡುವೆನೇ ಹೊರತು ಕೆಟ್ಟದ್ದನ್ನು ಮಾಡುವುದಿಲ್ಲ. ಅಲ್ಲದೆ ನನಗೆ ಮಕ್ಕಳಿಲ್ಲದಿದ್ದರೂ ನಾನು ಹೆಣ್ಣು, ತಾಯಿ. ಆದರೆ ನಿಮಗೆ ಸಂಶಯವಿದ್ದರೆ ಈಗ ನೋಡುವುದು ಬೇಡ, ಹಾಗೆಯೇ ಹೋಗುತ್ತೇನೆ.

ಪಿಂಗಳೆ— ಬೇಗಂ ಸಾಹೇಬಾ, ಕೋಪಿಸಬೇಡಿ. ದಯಮಾಡಿ; ನೋಡಿ ಕೊಂಡು ಹೋಗಿ. ನಿಮ್ಮಿಂದ ನಮಗೆ ಬಹಳ ಉಪಕಾರ ವಾಗತಕ್ಕದ್ದಿದೆ.

ಮುಲಾನಾ—ಮೆಲ್ಲನೆ ನಡೆಯಿರಿ. ಅವರಿಗೆ ನಿದ್ರೆ ಕೆಡಬಾರದು.

ರೋಷನಾರ—ಹಾಗೇ ಆಗಲಿ ನಡೆಯಿರಿ.

ಹೊರಡುವರು.

---

ಸ್ಥಾನ ೫

ಶಿವಾಜಿಯ ಕೊಠಡಿ. ಮಂಚದ ಮೇಲೆ ಶಿವಾಜಿ ಮಲಗಿದ್ದಾನೆ. ಏನೋ ಕನವರಿಸುತ್ತಿದಾನೆ. ತಾನಾಜಿ ಬೇಗ ಒಳಗೆ ಬರುತ್ತಾನೆ. ಸ್ವಲ್ಪ ಸದ್ದಾಗುತ್ತದೆ.

ಶಿವಾಜಿ— (ಅರೆನಿದ್ದೆಯಲ್ಲಿ) ಯಾರದು? (ಎನ್ನುತ್ತಾನೆ ತಾನಾಜಿ ಅವನ ಕಡೆ ನೋಡಿ ಮಂಚದ ಕೆಳಗೆ ಸೇರಿಕೊಳ್ಳುತ್ತಾನೆ. ಶಿವಾಜಿ ಮತ್ತೆ) ಯಾರದು? (ಎಂದು ಸುಮ್ಮನಾಗುತ್ತಾನೆ. ಅಷ್ಟರಲ್ಲೇ ಪಿಂಗಳೆ ಮುಂತಾದವರು

ಬಾಗಿಲ ಬಳಿ ಬರುತ್ತಾರೆ. ರೋಷನಾರ ಉಳಿದವರನ್ನು ಅಲ್ಲೇ ಬಿಟ್ಟು ಒಳಗೆ ಬರುತ್ತಾಳೆ. ಶಿವಾಜಿ ಅಡಿಯ ಸಪ್ಪುಳನ್ನು ಕೇಳಿ ಎಚ್ಚತ್ತು ಅವಳನ್ನು ನೋಡದೆ ಮಲಗಿದ್ದ ಹಾಗೆಯೇ) ಯಾರದು? ಆಹಾ ಇದೇನು ಕನಸು! ದೇವಿ ರಕ್ಷಿಸುತ್ತೇನೆಂದಳು. (ಎಂದು ಆಗ ಹಾಸಿಗೆಯ ಬಳಿ ಬಂದ ರೋಷನಾರೆಯನ್ನು ಕಂಡು) ದೇವೀ ಎದುರಿಗೇ ಬಂದೆಯಾ ಅಂಬಾ (ಎನ್ನುವನು. ಇವನ ಮಾತು ಅರೆನಿದ್ದೆಯ ಮಾತು.)

ರೋಷನಾರ—ಎಚ್ಚರವಾಗಿದೀಯಾ?

ಶಿವಾಜಿ— ನಿನ್ನ ಸೇವೆಗೆ ಸದಾ ಎಚ್ಚರವಾಗಿದೇನೆ. ಇದೇನು ಈ ವೇಷ ದಲ್ಲಿ ಬಂದಿದೀಯೆ?

ರೋಷನಾರ—ನೀನು ನನ್ನನ್ನು ಬಲ್ಲೆಯಾ?

ಶಿವಾಜಿ— ಬಲ್ಲೆ.

ರೋಷನಾರ—ಹೇಗೆ?

ಶಿವಾಜಿ— ಸದಾ ಧ್ಯಾನದಿಂದ.

ರೋಷನಾರ—ನಾನು ಯಾರು?

ಶಿವಾಜಿ— ನನ್ನ ಕುಲದೈವ.

ಮುಲಾನಾ ಬಾಗಿಲಿಂದ ಅವಳಿಗೆ ಬಂದುಬಿಡಹೇಳಿ ಸನ್ನೆಮಾಡುತ್ತಾನೆ.

ರೋಷನಾರ—ಮುಸಲ್ಮಾನನಾಗುತ್ತೀಯಾ?

ಶಿವಾಜಿ— ಛೇ, ಯಾಕಾದೇನು?

ರೋಷನಾರ—ಮುಸಲ್ಮಾನನಾದರೆ ಈ ಕಷ್ಟದಿಂದೆಲ್ಲ ಪಾರಾಗುವೆ? ದಖನಿನ ರಾಜನಾಗುವೆ?

ಮುಲಾನ ಬಂದುಬಿಡೆಂದು ಹೇಳಿ ಮತ್ತೆ ಮತ್ತೆ ಸನ್ನೆಮಾಡುತ್ತಾನೆ.

ಶಿವಾಜಿ— ನಿನ್ನ ದಯೆಯಿದ್ದರೆ ಹೀಗೆಯೇ ರಾಜನಾಗುವೆನು.

ರೋಷನಾರ—ನಿಜ. ನೀನಿನ್ನು ನಿದ್ದೆ ಹೋಗು. ನಾನು ಮರಳಿಬರುತ್ತೇನೆ. ಎಂದು ಹೊರಡುವಳು.

ಶಿವಾಜಿ— ಪುನಃ ದರ್ಶನ ಕೊಡುತ್ತೀಯಾ, ನಮೋನಮಃ. (ಎಂದು ಕೈ ಮುಗಿಯುವನು. ರೋಷನಾರ ಮರೆಯಾಗುವಳು.) ಇದೇನು ವಿಚಿತ್ರ. ನಾನು ಎಚ್ಚರವಾಗಿದೇನಲ್ಲ. ಹೀಗೆ ಉಂಟೆ? ನನಗೆ ಜ್ವರ

ದಿಂದ ಹೀಗಾಯಿತೇನೋ. ಇಲ್ಲದಿದ್ದರೆ ಲೋಕಮಾತೆ ನನಗೆ ಮುಸಲ್ಮಾನಿಯಂತೆ ಕಾಣುವುದಕ್ಕೂ, ಮುಸಲ್ಮಾನನಾಗು ವಿಯಾ ಎಂದು ಕೇಳುವುದಕ್ಕೂ ಕಾರಣವೇನು? ಮುಲಾನಾ, ಪಂತರೆ, ತಾನಾಜಿ.

ತಾನಾಜಿ— (ಮಂಚದ ಕೆಳಗಿನಿಂದ ಮೆಲ್ಲನೆ ಹೊರಗೆ ಬಂದು) ಮಹಾಸ್ವಾಮಿ.

ಮುಲಾನಾ ಅವನಿಗೂ ಮಾತನಾಡಬೇಡ ಹೊರಗೆಬಾ ಎಂದು ಸನ್ನೆಮಾಡುವನು.

ಶಿವಾಜಿ— ಈಗ ಇಲ್ಲಿಗೆ ಯಾರೋ ಬಂದಿದ್ದರು. ನೋಡಿದೆಯಾ?

ತಾನಾಜಿ— (ಮುಲಾನಾನ ಸನ್ನೆಯನ್ನು ನೋಡಿ) ವಿಚಾರಿಸುತ್ತೇನೆ, ಮಹಾಸ್ವಾಮಿ. (ಎಂದು ಹೊರಡುವನು.)

ಶಿವಾಜಿ— ವಿಚಾರಿಸು (ಎಂದು ಇನ್ನೊಂದುಕಡೆ ತಿರುಗುವನು.)

ಎಲ್ಲರೂ ಹೊರಟುಹೋಗುವರು.

---

## ಅಂಕ ೫

### ಸ್ಥಾನ ೧

ಶಿವಾಜಿಯ ಕೊಠಡಿ. ಶಿವಾಜಿ ಸುಖವಾಗಿ ಕುಳಿತಿದಾನೆ. ಪಿಂಗಳೆ ತಾನಾಜಿ ದೂರದಲ್ಲಿ ಕುಳಿತಿದಾರೆ.

ಶಿವಾಜಿ— ತಾನಾಜಿ ಬಂದು ಒಂದು ತಿಂಗಳಾಯಿತೆ? ಈ ಜ್ವರ ವಾಸಿಯಾಗುವುದು ಬಹಳ ಸಾವಕಾಶವಾಯಿತು.

ಪಿಂಗಳೆ— ಹೌದು ಮಹಾಸ್ವಾಮಿ.

ಶಿವಾಜಿ— ಮುಲಾನಾ ಹೊರಟುಹೋದದ್ದು ಬಿಡಾರ ಬರಿಯದಾಗಿ ಕಾಣುತ್ತದೆ.

ಪಿಂಗಳೆ— ಹೌದು ಮಹಾಸ್ವಾಮಿ. ಮನೆಯವರಂತೆ ಇದ್ದರು ಅವರು. ಇಷ್ಟು ಜನ ಮುಸಲ್ಮಾನರಲ್ಲಿ ಈತ ಒಬ್ಬ ಋಷಿಯಂತೆ ಇದಾರೆ.

ಶಿವಾಜಿ— ಋಷಿಯಂತೆ ಇರುವವರು ಹಿಂದೂಗಳಲ್ಲಿಯೂ ಬಹಳ ಜನಕ್ಕೆ ಒಬ್ಬರೇ ಎಂತರೆ.

ಪಿಂಗಳೆ— ಹೌದು ಮಹಾಸ್ವಾಮಿ.

ಶಿವಾಜಿ— ಏಕೆ, ನೀವು ಹೇಳುವುದನ್ನು ಕೇಳಿದರೆ ಬೇಗಂ ಸಾಹೇಬಾ ಒಳ್ಳೆಯವರೆಂದು ಕಾಣಿಸುತ್ತದೆ.

ಪಿಂಗಳೆ— ನಂಬುವುದಕ್ಕಿಲ್ಲ, ಮಹಾಸ್ವಾಮಿ.

ಶಿವಾಜಿ— ಆ ದಿನ ನಾನು ನಿಜವಾಗಿ ದೇವಿ ಮುಸಲ್ಮಾನ ವೇಷದಲ್ಲಿ ಬಂದು ನನ್ನನ್ನು ಪರೀಕ್ಷಿಸಿದಳೆಂದು ತಿಳಿದುಕೊಂಡೆ. ಮುಲಾನಾ ನಿದ್ದೆ ಬರುವಂತೆ ಕೊಟ್ಟಿದ್ದ ಔಷಧಿಯ ಮಂಕು ಹಾಗೆ ಮಾಡಿತು ಎಂತ ಕಾಣುತ್ತದೆ. ಆಕೆ ಬರುವುದಕ್ಕೆ ಮೊದಲು ದೇವಿ ಸ್ವಪ್ನದಲ್ಲಿ ಬಂದು ರಕ್ಷಿಸುತ್ತೇನೆ ಎಂತ ಹೇಳಿದಹಾಗಿತ್ತು. ಔಷಧಿ ಒಂದು ಕಡೆ, ಕನಸು ಒಂದುಕಡೆ, ಈಕೆ ಒರುವ ಸಮಾಚಾರ ನನಗೆ ತಿಳಿಯದ್ದು ಒಂದುಕಡೆ. ಎಲ್ಲಾ ಸೇರಿ ಇದೇನೋ ನಿಜವಾದ ದರ್ಶನ ಎನ್ನುವಹಾಗಾಯಿತು.

**ಪಿಂಗಳೆ—** ನಾವು ಬಾಗಿಲ ಬಳಿ ಇದ್ದೆವು. ಒಳಗೆ ಬರಬಹುದಾಗಿತ್ತು. ಮುಲಾನಾ, 'ಬೇಡಿ. ಅವರು ಏನೋ ತಿಳಿದುಕೊಂಡಿದಾರೆ. ತಿಳಿದುಕೊಂಡಿರಲಿ. ಈಗ ನಿದ್ದೆ ಕಲಕಬಾರದು. ತಿರುಗಿ ನಿದ್ದೆ ಬಂದುಬಿಡುತ್ತೆ' ಎಂದು ಹೇಳಿ ಆಕೆಗೆ ಬೇಗ ಹೊರಗೆ ಬನ್ನಿ ಎಂದು ಸನ್ನೆ ಮಾಡಿದರು. ಅವರು ಬಂದುಬಿಟ್ಟರು. ತಾನಾಜಿಗೂ ಹಾಗೆಯೇ ಸನ್ನೆಮಾಡಿದರು. ಆತನೂ ಬಂದುಬಿಟ್ಟನು. ತಾವು ಆಮೇಲೆ ಸುಖವಾಗಿ ನಿದ್ದೆಹೋದಿರಿ. ತಮಗೆ ದೇಹಸ್ಥಿತಿ ಸರಿಯಾಗುವವರೆಗೆ ನಿಜವನ್ನು ತಿಳಿಸಕೂಡದು, ದೇವಿ ಬಂದಳೆಂಬ ಧೈರ್ಯದಿಂದಲೇ ವಾಸಿಯಾಗಬಹುದು, ಎಂದು ಮುಲಾನಾ ಹೇಳಿದರು. ಆದ್ದರಿಂದಲೇ ಅವರು ನಿನ್ನೆ ಹೊರಡುವವರೆಗೆ ಆ ಮಾತು ತಮಗೆ ಹೇಳಲಿಲ್ಲ.

**ಶಿವಾಜಿ—** ನೀವು ಹೇಳಿದಂತೆ ಮುಲಾನಾ ಋಷಿಯೇ.

**ಪಿಂಗಳೆ—** ಇನ್ನು ಮುಂದಿನ ಏರ್ಪಾಡು ಏನು?

**ಶಿವಾಜಿ—** ಬಾದಷಹ ಇಷ್ಟರಲ್ಲೇ ಒಂದು ದಿನ ಇಲ್ಲಿಗೆ ಬರುತ್ತಾರೆಂತ ರಾಮಸಿಂಹ ರಾಜರು ಹೇಳಿದರಲ್ಲಾ. ಅವರು ಬಂದಾಗ ಊರಿಗೆ ಹೋಗುವುದಕ್ಕೆ ಅಪ್ಪಣೆ ಕೇಳುವುದು. ಒಪ್ಪಿದರೆ ಸರಿ. ಇಲ್ಲದಿದ್ದರೆ ಏನಾದರೂ ಮಾಡಿ ಹೊರಗೆ ಹೊರಡಬೇಕು.

**ಪಿಂಗಳೆ—** ಹೇಳದೆ ಹೊರಟುಹೋಗುವುದಾದರೆ ರಾಮಸಿಂಹ ರಾಜರು ಹೇಳಿದಂತೆ ಒಂದು ತಿಂಗಳ ಹಿಂದೆಯೇ ಹೋಗಬಹುದಾಗಿತ್ತು. ಅವರು ಎಲ್ಲಾ ಸಹಾಯವನ್ನೂ ಮಾಡುತ್ತೇವೆಂದರು.

**ಶಿವಾಜಿ—** ಒಂದು ತಿಂಗಳ ಹಿಂದೆ ಅದು ಸಾಧ್ಯವಾಗಿರಲಿಲ್ಲ, ಈಗ ಸಾಧ್ಯ.

**ಪಿಂಗಳೆ—** ಹೌದು ಮಹಾಸ್ವಾಮಿ. ಅವರು ಮೋಸಮಾಡಿದರೂ ನಾವು ತಪ್ಪಿಸಿಕೊಳ್ಳುವಹಾಗಿರಬೇಕು.

**ಶಿವಾಜಿ—** ಈಗ ನಾಲ್ಕು ದಿನಕ್ಕೆ ಐದು ದಿನಕ್ಕೆ ನಮ್ಮಕಡೆ ಜನ ಕೆಲವರನ್ನು ಕಳುಹಿಸುವುದು ಕರೆಸುವುದು ಇದಕ್ಕೆ ಏರ್ಪಾಡು ಮಾಡಿ. ಇಲ್ಲದಿದ್ದರೆ ಇಲ್ಲಿ ಬಂದಿರುವವರಿಗೆ ಬೇಸರವಾಗುವುದು ಎಂತ ಕೇಳಿದವರಿಗೆ ತಿಳಿಸಿ. ಅವರು ದಾರಿಯಲ್ಲಿ

ಬೇಕಾದರೆ ಉಪಯೋಗಿಸುವುದಕ್ಕೆ ಎಂದು ರಾಮಸಿಂಹ ರಾಜ ರಿಂದ ಕಾಗದಗಳನ್ನು ತೆಗೆದುಕೊಳ್ಳಿ.

ಸಿಂಗಳೆ— ಅಪ್ಪಣೆ.

ಸೇವಕನು ಬಂದು

ಸೇವಕ— ರಾಮಸಿಂಹ ರಾಜರು ದಯಮಾಡಿಸಿದಾರೆ.

ಶಿವಾಜಿ— ದಯಮಾಡಲಿ.

ರಾಮಸಿಂಹ ಬರುತ್ತಾನೆ. ಸಿಂಗಳೆ ಹೊರಗೆ ಹೋಗುತ್ತಾನೆ.

ಶಿವಾಜಿ— ರಾಂ ರಾಂ ಮಹಾರಾಜರೆ, (ರಾಮಸಿಂಹ ಕುಳಿತಮೇಲೆ) ಬಾದ ಷಹರು ಬರುವ ಮಾತು ಏನಾಯಿತು.

ರಾಮಸಿಂಹ—ಅವರು ಇಲ್ಲಿಗೆ ಬರುತ್ತೇನೆ ಎಂತ ಹೇಳುತ್ತಾಲೇನೋ ಇದ್ದರು. ಈಗ ಆ ಮಾತಿಗೆ ಒಪ್ಪಲಿಲ್ಲ. ಕಾಯಿಲೆಯಾಗಿದ್ದಾರಲ್ಲಾ, ಎಂತ ಬಂದು ನೋಡೋಣವೆಂದಿದ್ದೆ; ಈಗ ಆರೋಗ್ಯವಾಯಿ ತಲ್ಲಾ ನಾನು ಅಲ್ಲಿ ಬರಬೇಕಾದದ್ದಿಲ್ಲ; ಮತ್ತೊಂದು ದಿನ ದರ್ಬಾರಿಗೆ ಬರಲಿ; ಎಂದು ಇಂದು ಅಪ್ಪಣೆ ಮಾಡಿದರು. (ಮೆಲ್ಲಗೆ) ನೀವು ಅವರನ್ನು ಏನಾದರೂ ಮಾಡೀರೆಂದು ಭಯ ಏದೆಯೆಂದು ಕಾಣುತ್ತದೆ.

ಶಿವಾಜಿ— ನಾನು ತಿರುಗಿ ದರಬಾರಿಗೆ ಬರುವುದಿಲ್ಲ.

ರಾಮಸಿಂಹ—ತಾವು ಕೇಳಿದರೆ ತಮಗೆ ಹಿಂದೆ ಕೊಟ್ಟದ್ದಕ್ಕಿಂತಲೂ ಹೆಚ್ಚಿನ ಸ್ಥಾನವನ್ನು ಕೊಡುತ್ತಾರೆಂದು ಕಾಣುತ್ತದೆ. ಬೇಗಂಸಾಹೇಬರು ಅವರಿಗೆ ಒಂದೆರಡು ಮಾತು ಹೇಳಿದ್ದಾರೆ. ಮೊದಲೇ ಅವರು ನಿಮ್ಮ ವಿಷಯದಲ್ಲಿ ಕನಿಕರಿಸಿದ್ದರು. ಆ ರಾತ್ರಿ ನೀವು ಆಕೆಗೆ ಹೇಳಿದ ಗೌರವದ ಮಾತುಗಳಿಂದ ಅವರು ತೀರಾ ನಿಮ್ಮ ಪಕ್ಷ ದವರಾದರೆಂತ ಹೇಳಬಹುದು.

ಶಿವಾಜಿ— ರಾಮಸಿಂಹ ಮಹಾರಾಜ್, ನನಗೆ ಬಾದಷಹರ ಆಸ್ಥಾನ ದಲ್ಲಿ ದೊಡ್ಡ ಸ್ಥಾನ ಬೇಡ. ನಾನು ಕೇಳುವುದಿಲ್ಲ. ನನ್ನನ್ನು ಸುಮ್ಮನೆ ಊರಿಗೆ ಕಳುಹಿಸಿಕೊಡುವಂತೆ ಏರ್ಪಾಡುಮಾಡಿ.

ರಾಮಸಿಂಹ—ನೀವು ಊರಿಗೆ ಹೋಗುವ ಮಾತಿಗೆ ಅವರು ಒಪ್ಪುವುದಿಲ್ಲ. ನಿಮಗೆ ಬೇಸರವಾಗಿ ನೀವು ದರ್ಬಾರಿಗೆ ಮರಳಿ ಬಂದು ಅವರು ಹೇಳಿದಂತೆ ಕೇಳುವವರೆಗೂ ನೀವು ಆಗ್ರಾದಲ್ಲೇ ಇರಬೇಕಾಗುತ್ತದೆ. ಅದೇ ಅವರ ಅಭಿಪ್ರಾಯ.

ಶಿವಾಜಿ— ಹಾಗಾದರೆ ಅದು ನನ್ನ ದುರದೃಷ್ಟ. ಇಲ್ಲೇ ಇರಬೇಕೆಂದರೆ ಇರುತ್ತೇನೆ. ನನ್ನ ಜನ ಉಳಿದಿರುವವರು ಊರಿಗೆ ಹೋಗುವುದಕ್ಕೆ, ಅವರಿಗೆ ಬದಲು ಜನ ಬರುವುದಕ್ಕೆ, ಏರ್ಪಾಡುಮಾಡಿ. ದಾರಿಯಲ್ಲಿ ಅವರ ಅನುಕೂಲಕ್ಕೆ ತಮ್ಮ ಕಡೆಯ ಜನರಿಗೆ ತಾವು ಪತ್ರಗಳನ್ನು ಕೊಡಿ. ಇಷ್ಟು ನನ್ನ ಪ್ರಾರ್ಥನೆ.

ರಾಮಸಿಂಹ—ಪತ್ರಗಳನ್ನು ಕೊಡುತ್ತೇನೆ. ತಾವೂ ತಮ್ಮವರೂ ಎಲ್ಲಾ ವಿಷಯದಲ್ಲಿಯೂ ಜಾಗ್ರತೆಯಿಂದ ನಡೆದುಕೊಳ್ಳಬೇಕು. ಅಷ್ಟೆ.

ಶಿವಾಜಿ— ನಡೆದುಕೊಳ್ಳುತ್ತೇನೆ. ತಮ್ಮ ಉಪಕಾರಕ್ಕೆ ನಾನು ಬಹಳ ಕೃತಜ್ಞನಾಗಿದ್ದೇನೆ. ತಮ್ಮ ತಂದೆಯವರ ಕ್ಷಮಾಪಣೆ ಕೇಳಿದೆನೆಂದು ಹೇಳಿ.

ರಾಮಸಿಂಹ—ಹೇಳುತ್ತೇನೆ (ಎಂದು ಹೊರಡುವನು).

ಶಿವಾಜಿ ಅಂಬಾ ಭವಾನಿಯ ಪಟವನ್ನು ಸ್ವಲ್ಪ ಹೊತ್ತು ನೋಡಿ

ಶಿವಾಜಿ— ಯಾರಲ್ಲಿ.

ಸೇವಕ— ಮಹಾಸ್ವಾಮಿ.

ಶಿವಾಜಿ— ಪಂತರನ್ನು ಬರಹೇಳು.

ಸೇವಕ— ಅಪ್ಪಣೆ. (ಹೋಗುವನು. ಪಿಂಗಳೆ ಒಡನೆ ಬರುವನು.)

ಶಿವಾಜಿ— ದ್ವಾದಶಿ ದ್ವಾದಶಿ ಶಾಕದಾನ ಮಾಡುತ್ತಿದ್ದೀರಷ್ಟೆ?

ಪಿಂಗಳೆ— ಮಾಡುತ್ತಿದ್ದೇವೆ.

ಶಿವಾಜಿ— ನಾಳೆ ಬರುವ ದ್ವಾದಶಿ ವಿಶೇಷ ಶಾಕದಾನಕ್ಕೆ ಏರ್ಪಾಡು ಮಾಡಬೇಕೆಂದು ಬಾದಷಹರ ಕಡೆಯವರಿಗೆ ತಿಳಿಸಿ. ಈಸಲ ಕಾಯಿಲೆ ಬಿದ್ದು ಎದ್ದಿದ್ದೇನೆ. ತುಂಬ ದಾನ ಮಾಡುವುದು ಶ್ರೇಯಸ್ಕರ ಎಂತ ಪ್ರಚಾರಮಾಡಿ.

ಪಿಂಗಳೆ— ಅಪ್ಪಣೆ.

ಶಿವಾಜಿ— ಇಲ್ಲಿಗೆ ರಘುನಾಥನನ್ನು ಕಳುಹಿಸಿ.

ಪಿಂಗಳೆ— ಅಪ್ಪಣೆ (ಎಂದು ಹೋಗುತ್ತಾನೆ).

ಶಿವಾಜಿ— ಅಂಬಾ, ಇದು ನಿನ್ನ ಸೂಚನೆಯೆಂದು ಇದಕ್ಕೆ ಮನಸ್ಸು ಮಾಡಿದೇನೆ. ಇದನ್ನು ನಡೆಯಿಸು.

---

ಸ್ಥಾನ ೨

ಬಿಡಾರ. ಉತ್ಥಾನ ದ್ವಾದಶಿಯ ಬೆಳಿಗ್ಗೆ. ರಘುನಾಥ ತಾನಾಜಿ ಪಿಂಗಳೆ.

ಪಿಂಗಳೆ— ರಘುನಾಥ ಸಿಂಹರೆ, ಧರ್ಮಪಾಲ ಸೇರಾಯಿ ಬೈರಾಗಿಗಳು ಸಾಕಾದಷ್ಟು ಜನ ಬರುತ್ತಾ ಹೋಗುತ್ತಾ ಇರುವಂತೆ ಏರ್ಪಾಡು ಮಾಡಿದ್ದೀರಾ?

ರಘುನಾಥ—ಮಾಡಿದೆ. ನಮ್ಮ ಜನರು ವೇಷದಲ್ಲಿ ಮರಳಿ ಮರಳಿ ಬಟ್ಟೆ ಬದಲಾಯಿಸಿಕೊಂಡು ಬರಬೇಕು. ನಾನು ಮೊದಲು ಒಂದು ಸಲ ದೊಡ್ಡ ಬುಟ್ಟಿಯನ್ನು ಹೊತ್ತುಕೊಂಡು ಹೊರಗೆ ಬರ ಬೇಕು. ನಾನು ಬರುವಾಗ ನಮ್ಮವರು ವೇಷದಲ್ಲಿ ಒಟ್ಟಾಗಿ ನನ್ನ ಜತೆಯಲ್ಲಿರಬೇಕೆಂದು ಹೇಳಿದ್ದೇನೆ. ಎಲ್ಲಾ ಸರಿಹೋಗುತ್ತೆ, ತಮಗೆ ಯೋಚನೆ ಬೇಡ.

ಪಿಂಗಳೆ— ಎಲ್ಲಾ ಸರಿಯಾಗಿದೆ ಅಲ್ಲವೆ? ತಾನಾಜಿ?

ತಾನಾಜಿ— ನಾನೂ ಎಲ್ಲಾ ವಿಚಾರಿಸಿದೇನೆ. ಸರಿಯಾಗಿದೆ.

ಪಿಂಗಳೆ— ಮೊನ್ನೆ ಹೋಗಬೇಕಾಗಿದ್ದ ನಾಲ್ವರ ಬಗ್ಗೆ ತೆಗೆದುಕೊಂಡಿದ್ದ ಕಾಗದಗಳು ಇವೆಯಲ್ಲವೆ?

ತಾನಾಜಿ— ಇವೆ.

ಪಿಂಗಳೆ— ದಾರಿಯಲ್ಲಿ ನಮ್ಮವರು ಅಲ್ಲಲ್ಲಿ ಸಿದ್ಧವಾಗಿ ಇರುತ್ತಾರೆ?

ತಾನಾಜಿ— ಎಲ್ಲಾ ಇರುತ್ತಾರೆ. ಆ ವಿಷಯ ಯೋಚಿಸಬೇಡಿ.

ಪಿಂಗಳೆ— ನಾನು ದಾನಮಾಡುವ ಕಡೆ ಇರುತ್ತೇನೆ. ರಘುನಾಥ ಸಿಂಹರು ಸಂಜೆಗೆ ಮುಂದಾಗಿ ಒಂದುಸಲ ಬರಬೇಕು. ನೀವು ಊಟ

ವಾದೊಡನೆಯೆ ಹೊರಟು ಕುದುರೆಗಳನ್ನು ಇಟ್ಟುಕೊಂಡು ಧರ್ಮಪಾಲ ಸೇರಾಯಿಗೆ ಸ್ವಲ್ಪ ದೂರದಲ್ಲಿ ಇರಬೇಕು. ಕುದುರೆ ದೊಡ್ಡದೇನೂ ಅಲ್ಲವಲ್ಲ.

ತಾನಾಜಿ— ಇಲ್ಲ. ತಟ್ಟುಗಳಂತಿವೆ. ನಾನೂ ಬೈರಾಗಿಯ ಉಡುಪನ್ನು ತೆಗೆದುಕೊಂಡಿದೇನೆ. ಯಾರಿಗೂ ತಿಳಿಯುವುದಿಲ್ಲ. ತಮಗೆ ಯೋಚನೆ ಬೇಡಿ.

ಪಿಂಗಳೆ— ಬಹಳ ಸಂತೋಷ. ಇಂದು ಇದನ್ನು ದೇವರು ನಮ್ಮಿಂದ ನಡೆಸಿಬಿಟ್ಟರೆ ನಮ್ಮ ಪುಣ್ಯಕ್ಕೆ ಕಡಿಮೆಯೇ ಇಲ್ಲ. ಇನ್ನು ತಾವು ನಡೆಯಿರಿ, ರಘುನಾಥ ಸಿಂಹರೆ. ದಯಮಾಡಿ ತಾನಾಜಿ.

ಹೊರಡುವರು.

---

## ಸ್ಥಾನ ೨

ಅದೇ ಬಿಡಾರ. ಶಿವಾಜಿ, ಪಿಂಗಳೆ.

ಶಿವಾಜಿ— ರಘುನಾಥ ಸಿಂಹ ಬಂದರೋ?

ಪಿಂಗಳೆ— ಬಂದಿದಾರೆ.

ಶಿವಾಜಿ— ತಾನಾಜಿ ಊರಮುಂದೆ ಕುದುರೆ ಇಟ್ಟುಕೊಂಡಿರುತ್ತಾರಷ್ಟೆ?

ಪಿಂಗಳೆ— ಇರುತ್ತಾರೆ.

ಶಿವಾಜಿ— ಬಹಳ ಗಲಭೆಯಾಗುತ್ತಿದೆ.

ಪಿಂಗಳೆ— ಆವಶ್ಯಕ ಮಹಾಸ್ವಾಮಿ.

ಶಿವಾಜಿ— ಹೀರಾಜಿ ಇಲ್ಲಿರುತ್ತಾನೊ?

ಪಿಂಗಳೆ— ತಾವು ರಾತ್ರಿಯೆಲ್ಲಾ ಪೂಜೆಗೆ ಕುಳಿತಿರುವಿರೆಂದೂ, ಯಾರೂ ದೇವರ ಮನೆಯ ಬಳಿ ಬಂದು ತೊಂದರೆ ಮಾಡಕೂಡದೆಂದೂ ಹೇಳಿದೇನೆ. ಅಲ್ಲಿ ಅವರು ಕುಳಿತಿರುತ್ತಾರೆ.

ಶಿವಾಜಿ— ನಾನು ಹೋದ ಒಡನೆಯೇ ನೀವೂ ಬಂದುಬಿಡಬೇಕು.

ಪಿಂಗಳೆ— ಬರುತ್ತೇವೆ.

ರಘುನಾಥ ಬರುತ್ತಾನೆ. ದೊಡ್ಡ ಎರಡು ಬುಟ್ಟಿಯಲ್ಲಿ ಸೊಪ್ಪು ಇದೆ.

ಶಿವಾಜಿ— ಸಾಕಾದಷ್ಟು ಜನ ಓಡಾಡುತ್ತಾ ಇದ್ದಾರೋ?

ರಘುನಾಥ— ಇದಾರೆ.

ಶಿವಾಜಿ— ಯಾರಾದರೂ ಕೇಳಿದರೋ ನಿಮ್ಮನ್ನ ?

ರಘುನಾಥ—ಕೇಳಿದರು ಮಹಾಸ್ವಾಮಿ. ಎರಡನೇ ಬಾಗಿಲ ಪಹರೆಯವನು ಏನೋ ಇಷ್ಟು ಸೊಪ್ಪು ತಕ್ಕೊಂಡು ಹೋಗುತೀಯಾ ಎಂದ. ಹ್ಯಾಗೂ ಬಟ್ಟೇ ಸಿಕ್ಕುತ್ತೆ. ನಮ್ಮ ದಾಯಾದಿ ಒಬ್ಬನಿದ್ದಾನೆ. ಅವನನ್ನ ಬೇಯಿಸಿ ತಿನ್ನುತೇನೆ ಎಂದೆ. ನಕ್ಕ.

ಶಿವಾಜಿ— (ನಗುತ್ತ) ಒಳ್ಳೇ ಬುದ್ಧಿವಂತರು ನೀವು. (ಎಂದು ತೆರೆಯಕಡೆ ತಿರುಗಿ) ಹೀರಾ.

ಒಳಗಡೆಯಿಂದ

ಧ್ವನಿ— ಬಾಬ.

ಶಿವಾಜಿ— ನೀನು ತೊಂದರೆಗೆ ಸಿಕ್ಕಬಾರದು.

ಧ್ವನಿ— ನಿನಗೇಕೆ ಚಿಂತೆ. ನೀ ತಪ್ಪಿಸಿಕೋ. ನಾನು ನಿನಗಿಂತ ಮೊದಲೇ ಊರಲ್ಲಿರುತ್ತೇನೆ.

ಶಿವಾಜಿ— ನನ್ನ ವೇಷ ಹಾಕಿಕೊಂಡದ್ದಕ್ಕೆ ನಿನಗೆ ಶಿಕ್ಷೆ ರಾತ್ರಿಯೆಲ್ಲಾ ದೇವರ ಮುಂದೆ ಸುಮ್ಮನೆ ಕುಳಿತಿರುವುದು.

ಧ್ವನಿ— ನಾನು ಸುಮ್ಮನೆ ಕುಳಿತಿರುವುದಿಲ್ಲ.

ಶಿವಾಜಿ— ಮತ್ತೆ?

ಧ್ವನಿ— ದೇವರೆದುರಿಗೆ ತಿಂಡಿ ಇಟ್ಟಿದಾರೆ. ಅದನ್ನು ತಿನ್ನುತ್ತಾ ಇರುತ್ತೇನೆ. ಮಧ್ಯೆ ಮಧ್ಯೆ ನೀನು ಸುಖವಾಗಿ ಪಾರಾಗುವಂತೆ ಮಾಡೆಂದು ದೇವಿಗೆ ಪ್ರಾರ್ಥನೆ ಮಾಡುತ್ತೇನೆ.

ಶಿವಾಜಿ— (ಕಣ್ಣೀರು ಕೂಡಿದ ನಗೆಯಿಂದ) ನನಗೆ ಒಳ್ಳೇ ತಮ್ಮ (ಎಂದು ಪಿಂಗಳಿಗೆ) ಎಲ್ಲರೂ ಸೌಖ್ಯವಾಗಿ ಬರುವ ಏರ್ಪಾಡುಮಾಡಿ. ಇವನು ಇಲ್ಲಿ ತೊಂದರೆಗೆ ಸಿಕ್ಕಿಕೊಂಡಾನು. ತಾಯಿಯವರಿಗೆ ಉತ್ತರ ಹೇಳುವುದು ಕಷ್ಟವಾದೀತು (ಎಂದು ದೇವಿಯ ಪಟದ ಕಡೆ ನೋಡಿ ಕೈಮುಗಿದು ಬುಟ್ಟಿಯೊಳಕ್ಕೆ ಕೂಡುತ್ತಾನೆ. ಇವರು ಸೊಪ್ಪನ್ನು ಮುಚ್ಚುತ್ತಾರೆ.)

---

## ಸ್ಥಾನ ೪

ಬಾಗಿಲ ಮುಂದೆ. ಮೊಗಲಾಯಿ ಪಹರೆಯವನು ನಡೆಯುತ್ತಿದಾನೆ.

ರಘುನಾಥ ಬುಟ್ಟಿ ಹೊತ್ತು ಬರುತ್ತಿದ್ದಾನೆ. ಹಲವು ಜನರು ಬರೀ ಬುಟ್ಟಿ ಗಳೊಡನೆ ಬರುತ್ತಾ ಬುಟ್ಟಿಗಳಲ್ಲಿ ಸೊಪ್ಪು ತೆಗೆದುಕೊಂಡು ಹೋಗುತ್ತಾ ಇದ್ದಾರೆ.

ಪಹರೆಯುವನು—(ರಘುನಾಥನಿಗೆ) ಇದು ಇನ್ನೊಬ್ಬನ್ನ ಬೇಯಿಸಿ ತಿನ್ನೋದ ಕ್ಕೇನೋ.

ರಘುನಾಥ—ಇದು ನಮ್ಮ ಚಿಕ್ಕಪ್ಪ ಒಬ್ಬ ಮುಸಲ್ಮಾನ ಇದಾನೆ. ಅವನ್ನ ಬೇಯಿಸೋಕೆ. (ಪಹರೆಯವನು ನಗುತ್ತಾನೆ; ಹಾಗೆಯೇ ಕೋಲಿ ನಿಂದ ಬುಟ್ಟಿಯಮೇಲೆ ಒಂದು ಏಟು ಹಾಕುತ್ತಾನೆ. ರಘುನಾಥನು ನಗುತ್ತಾ ಮುಂದೆ ಹೋಗುತ್ತಾನೆ.)

---

## ಸ್ಥಾನ ೫

ಗಜೇಂದ್ರಗಡ, ಶಿವಾಜಿ. ತಾನಾಜಿ ಒಂದು ಕ್ಷಣ ಬಿಟ್ಟು ಬರುತ್ತಾನೆ.

ಶಿವಾಜಿ— ನಮ್ಮ ಸರಹದ್ದಿಗೆ ಬಂದಹಾಗಾಯಿತು ತಾನಾಜಿ.

ತಾನಾಜಿ—ಹೌದು ಮಹಾಸ್ವಾಮಿ.

ಶಿವಾಜಿ— ನಮ್ಮ ಹಿಂದೆ ಯಾರೂ ಬಂದಂತೆ ಕಾಣುವುದಿಲ್ಲ.

ತಾನಾಜಿ—ನಾವು ಕಾಶೀ ಜಗನ್ನಾಥದಮೇಲೆ ಬಂದದ್ದರಿಂದ ನಮ್ಮನ್ನು ಯಾರೂ ಅಟ್ಟಿಬರಲಿಲ್ಲ. ಸೂರತ್ತಿನ ಕಡೆ ಹೋದಂತೆ ಕಾಣು ತ್ತದೆ. ತಾವು ಹೀಗೆ ಬಂದದ್ದು ಒಳ್ಳೆಯದಾಯಿತು.

ಶಿವಾಜಿ— ಹೌದು, ಧರ್ಮಶಾಲ ಸೇರಾಯಿಯಿಂದ ಹೊರಡುವ ಕ್ಷಣ ದಲ್ಲಿ ನನಗೆ ಹೀಗೆ ಪ್ರೇರಣೆಯಾಯಿತು. ತಾನಾಜಿ, ಈ ಕುದುರೆ ಸೋತಿತು. ಬೇರೆ ಕುದುರೆ ಇಲ್ಲದಿದ್ದರೆ ಕಾಲ ಕಳೆಯುತ್ತೆ.

ತಾನಾಜಿ—ಹೌದು, ಇದೇನೋ ಗಜೇಂದ್ರಗಡಕ್ಕೆ ಬಂದುಬಿಟ್ಟೆವೆಂತ ಕಾಣುತ್ತೆ, ಮಹಾಸ್ವಾಮಿ. ರಾತ್ರಿ ದಾರಿ ತಿಳಿಯಲಿಲ್ಲ.

ಶಿವಾಜಿ — ಆದರೇನು ?

ತಾನಾಜಿ— ಇಲ್ಲಿರುವವನು ಮುಸಲ್ಮಾನ ಕೊತ್ವಾಲ.

ಶಿವಾಜಿ— (ದಾರಿಯಲ್ಲಿ ಯಾರೋ ಒಬ್ಬನು ಬರುತ್ತಾನೆ. ಅವನನ್ನು) ಅಯ್ಯಾ, ಇಲ್ಲಿ ಕೊತ್ವಾಲ ಕಚೇರಿ ಎಲ್ಲಿ.

ತಾನಾಜಿ— ಮಹಾಸ್ವಾಮಿ ಇದೇಕೆ?

ಶಿವಾಜಿ— (ಮೆಲ್ಲನೆ) ಆ ಕಡೆ ಹೋಗದೇ ಇರುವುದಕ್ಕೆ. (ತಾನಾಜಿ ನಗುತ್ತಾನೆ.)

ದಾರಿಯವ—ಅಕೋ ಅಲ್ಲಿ. ಅಲ್ಲಿ ಕುದುರೆ ಕಟ್ಟಿದೆ, ಕಾಣುತ್ತೆಯೇ? ಅಲ್ಲಿ.

ಶಿವಾಜಿ— ತಾನಾಜಿ ಬನ್ನಿ, ಅಂಬೆ ದಾರಿ ತೋರಿಸುತ್ತಿದಾಳೆ. ಹೋಗಿ ಎರಡು ಕುದುರೆ ತೆಗೆದುಕೊಂಡು ಬನ್ನಿ. ಇನ್ನೂ ಮಸಕಾಗಿದೆ.

ತಾನಾಜಿ— ಅಪ್ಪಣೆ. ತಾವು ಇಲ್ಲೇ ಮರೆಯಲ್ಲಿದ್ದರೆ ಬಂದುಬಿಡುತ್ತೇನೆ.

ಹೋಗುವನು. ಶಿವಾಜಿ ಅಲ್ಲಿ ನಿಂತು ಸುತ್ತ ನೋಡುವನು.

ತಾನಾಜಿ—(ಸ್ವಲ್ಪ ಹೊತ್ತು ಬಿಟ್ಟು ಮರೆಯಿಂದ) ಮಹಾಸ್ವಾಮಿ, ಬೇಗನೆ ಬರಬೇಕು.

ಶಿವಾಜಿ— ಬಂದೆ (ಹೋಗುವನು).

---

## ಸ್ಥಾನ ೭

ರಾಯಘಡ, ಅರಮನೆಯ ಮುಂದೆ ಬಾಗಿಲಲ್ಲಿ ಸಯಿಬಾಯಿ.

ಸಯಿ— ಕುದುರೆ ಬಂದ ಸದ್ದು. ಊರಬಾಗಿಲಲ್ಲಿ ಮಾತು. ಅವರೇ ಆಗಬಾರದೆ? ದೇವರೇ ನೀನು ಕಾಪಾಡು (ಎಂದು ಆ ಕಡೆ ನೋಡಿ) ಅವರೇ, ಅವರೇ (ಎಂದು ಬೀದಿಗೆ ಓಡಿಬರುವಳು).

ಶಿವಾಜಿ— ಯಾರದು? ಸಯಿ ಏನು ಇಷ್ಟು ನಸುಕತ್ತಲಲ್ಲಿ ಎದ್ದಿದ್ದೀಯೆ.

ಸಯಿ— ನೀವು ದೇಹಲಿಗೆ ಹೋದಂದಿನಿಂದ ಎಂದು ಬರುವಿರೋ ಎಂದು ಎಲ್ಲರೂ ಹಗಲೂ ರಾತ್ರಿ ಕಾದಿದೇವೆ. ಸುಖವಾಗಿ ಬಂದಿರಲ್ಲಾ. ನನ್ನ ಮಾಂಗಲ್ಯದ ಪುಣ್ಯ. (ಎಂದು ಕಾಲಮೇಲೆ ಬೀಳುವಳು. ಮೂರ್ಛೆ ಹೋಗುವಳು. ಶಿವಾಜಿ ಅವಳನ್ನು ಎತ್ತಿಕೊಂಡು)

ಶಿವಾಜಿ— ತಾನಾಜಿ ಬನ್ನಿ. ಬಂದು ಸೇರಿದೆವೆಂದು ನಿಮ್ಮ ಮನೆಗೆ ಹೇಳಿ ಕಳುಹಿಸಿ (ಎಂದು ಒಳಗೆ ಹೋಗುವನು).

---

ಸ್ಥಾನ ೭

ಜೀಜಾಬಾಯಿಯ ಕೊಠಡಿ. ರಾಮದಾಸ ಇದಾನೆ.

ಜೀಜಾ— ನನಗೆ ನಂಬಿಕೆಯಿದೆ. ಆದರೆ ಹೆದರಿಕೆಯೂ ಇದೆ. ಅಂಬಾ ಭವಾನಿ ಕಾಪಾಡುತಾಳೆ ಎಂತ ಬಲ್ಲೆ. ಆದರೆ ಕಷ್ಟ ಬಂದಾಗ ಭಯವಾಗುತ್ತದೆ.

ರಾಮ— ಯಾರಿಗೂ ಅಷ್ಟೇ. ನಮ್ಮ ತುಕಾರಾಮನಿಗೆ ಒಬ್ಬನಿಗೆ ನಂಬಿಕೆ ಎಂದರೆ ಕಡೇಮುಟ್ಟಿದ ನಂಬಿಕೆ. ನನಗೆ ಕೂಡ ಅವನಿಗಿರುವಷ್ಟು ನಂಬಿಕೆಯಿಲ್ಲ. ಎಂದರೆ ದೇವರು ಕಾಪಾಡುತಾನೆ ಎನ್ನುವ ಮಾತ್ರದ ಮಾತಲ್ಲ; ಮನಸ್ಸು ಭದ್ರವಾಗಿಲ್ಲ. ಇದರ ಕಾರಣ ಮಮತೆ. ನಂಬಿಕೆ ಎಷ್ಟೇ ಇದ್ದರೂ ಮಮತೆ ಹೋಗದೆ ಇದ್ದರೆ ಭೀತಿ ಹೋಗುವುದಿಲ್ಲ.

ಜೀಜಾ— ಮಮತೆ ಕೊಂಚಕ್ಕೆ ಹೋಗುತ್ತದೆಯೆ?

ರಾಮ— ಇದು ಬಾಡಿಗೆ ಮನೆ ಎಂತ ಹೇಳಿಕೊಳ್ಳುತ್ತಾ ಇರಬೇಕು. ನಮ್ಮ ಹುಡುಗ ನಮ್ಮವನಲ್ಲ, ದೇವರವನು ಎಂದುಕೊಳ್ಳುತ್ತಾ ಇರಬೇಕು. ಈ ಧರ್ಮ ನನ್ನದಲ್ಲ ನಿನ್ನದು ಎನ್ನುತ್ತಾ ಇರಬೇಕು. 'ನಾನು ಎನ್ನುವುದು ಸಂಸಾರ, ನೀನು ಎನ್ನುವುದು ಸುಖಸಾರ' ಎಂದು ಪುರಂದರದಾಸರು ಹೇಳಿದ್ದನ್ನು ನೆನೆಯುತ್ತಾ ಇರಬೇಕು.

ಜೀಜಾ— ಅದನ್ನೇ ಅಭ್ಯಾಸಮಾಡುತ್ತಿದೇನೆ. ಇಲ್ಲಿ ನಮ್ಮನ್ನೆಲ್ಲ ನೋಡಿಕೊಳ್ಳುತ್ತಿರುವ ತಾಯಿ ಅಲ್ಲಿ ನಮ್ಮ ಹುಡುಗನನ್ನ ನೋಡಿಕೊಳ್ಳುತ್ತಿದಾಳೆ. ಎಂಥ ಕಷ್ಟಗಳಿಂದಲೋ ಅವನನ್ನು ರಕ್ಷಿಸಿದಳು. ಈಗಲೂ ರಕ್ಷಿಸುತ್ತಾಳೆ. ಈ ಹೊತ್ತು ಈ ವ್ರತ ಮುಗಿಯುತ್ತದೆ. ಇಷ್ಟರಲ್ಲೇ ಅವನು ಬರಬೇಕು, ಬರುತ್ತಾನೆ ಎಂತ ಮನಸ್ಸಿಗೆ ತೋರುತ್ತಿದೆ. ಹಾಗೆಯೇ ಏನೋ ಎಂದು

ಸಂದೇಹವಾಗುತ್ತದೆ. ಅಭ್ಯಾಸ, ಅಭ್ಯಾಸ ಎನ್ನುತ್ತೀರಲ್ಲಾ ನೀವು............ಬಾಗಿಲಲ್ಲಿ ಏನೋ ಮಾತು. ಇಷ್ಟು ಹೊತ್ತಿನಲ್ಲಿ ಯಾರು?

ರಾಮ— ಅಂಬಾಭವಾನಿ ಶಿವಾಜಿಯನ್ನು ಕರೆದುತಂದಿರಬಹುದು.

ಜೀಜಾ— ನಿಮ್ಮ ಮಾತು ನಿಜವಾಗಲಿ. ನೀವು ಅಭ್ಯಾಸ, ಅಭ್ಯಾಸ ಎನ್ನುತ್ತೀರಲ್ಲಾ ಅದು ನಿಜ ಗುರುಗಳೆ. ಒಂದು ಪಾಠ ಬಂತು ಎಂದರೆ ನಾವು ಇನ್ನೊಂದು ಪಾಠ ಒಡನೆಯೇ ಬರಬೇಕು ಎನ್ನುತ್ತೇವೆ. ಇದು ನಮ್ಮ ಆತುರ. ಮರ ಬೆಳೆಯಬೇಕು ಎಂದರೆ ಕಾಲ ಬೇಕು.

ರಾಮ— ವಾಜವೀ ಮಾತು. ಇದೇನು ಯಾರೋ ಒಳಗೆ ಬರುತ್ತಿರುವ ಹಾಗೆ ಇದೆ. ಶಿವನ ಹೆಜ್ಜೆ, ಶಿವಾ.

ಶಿವಾಜಿ— (ಹೊರಗಿನಿಂದ) ಗುರುಗಳೇ, ರಾಂ ರಾಂ. ಮಾಯಿಸಾ (ಎಂದು ಬರುವನು).

ಜೀಜಾ— ಶಿವಾ ಬಂದೆಯಾ ನನ್ನಪ್ಪ. (ಎಂದು ಬಳಿಗೆ ಬಂದ ಅವನನ್ನು ಗುರುಗಳ ಕಾಲಮೇಲೆ ಹಾಕಿ ದೇವಿಯ ವಿಗ್ರಹದ ಕಡೆ ತಿರುಗಿ) ಅಂಬಾ, ನಾನು ಸಂಶಯಪಟ್ಟದ್ದನ್ನು ಮನ್ನಿಸು (ಎಂದು ನಮಸ್ಕರಿಸುವಳು).

ಶಿವಾಜಿ— (ಗುರುವಿಗೆ ನಮಸ್ಕರಿಸಿ, ಎದ್ದು ತಾಯಿಗೆ ನಮಸ್ಕರಿಸಿ) ಮಾಯಿಸಾ ಬಹಳ ಹೆದರಿದ್ದಿರಾ?

ಜೀಜಾ— ಹೆದರಿದ್ದೆವು ಶಿವಾ.

ಶಿವಾಜಿ— ಗುರುಗಳು ಕೂಡ?

ರಾಮ— ಗುರುಗಳೂ ಹೆದರಿದ್ದರು. ಆದ್ದರಿಂದಲೇ ಅವರನ್ನ ಗುರುಗಳು ಎನ್ನಬೇಡ ಎಂತ ನಾನು ನಿನಗೆ ಅನೇಕಸಲ ಹೇಳಿರುವುದು.

ಶಿವಾಜಿ— ಆದ್ದರಿಂದಲೇ ಆ ಗುರು ನನಗೆ ದೇವರು, ತಂದೆ, ಅಣ್ಣ ಎಲ್ಲಾ ಒಂದಾದಂತೆ ಕಾಣುತ್ತಿರುವುದು. ಆದರೆ ಈಸಲ ಹೆದರಿಕೆಗೆ ಬೇಕಾದಷ್ಟು ಕಾರಣವಿತ್ತು.

ರಾಮ— ದೇವರು ಪಾರುಮಾಡಿಸಿದ. ಅದು ಹಾಗಿರಲಿ. ಈಗತಾನೇ ಬಂದಿದ್ದೀಯೆ, ನಿನಗೆ ಆಯಾಸವಾಗಿದೆ, ನಿಜ. ಆದರೆ ಒಂದು ಮಾತು ಈಗಲೇ ಹೇಳಿಬಿಡುತ್ತೇನೆ. ನೀನು ಆಗ್ರಾದಲ್ಲಿದ್ದಾಗ

ನಾವು ಯೋಚನೆಮಾಡಿ ನೀನು ಬಂದ ಒಡನೆ ನಿನಗೆ ಪಟ್ಟಾಭಿಷೇಕ ನಡೆಯಿಸಿಬಿಡಬೇಕು ಎಂದು ಯೋಚಿಸಿದೆವು. ಇವರು ಯಾರೂ ನಿನ್ನನ್ನು ತಿರುಗಿ ಮನ್ಸಬ್ದಾರ ಸುಬೇದಾರ ಎನ್ನಬಾರದು, ಛತ್ರಪತಿ ಎನ್ನಬೇಕು. ಶಾಸ್ತ್ರಗಳನ್ನೆಲ್ಲಾ ನೋಡಿಸಿದೆ, ಕಾಶಿ ಯಿಂದ ಅಭಿಪ್ರಾಯ ತರಿಸಿದೆ. ನೀವುಗೆಲ್ಲಾ ತಿಳಿಯುವಹಾಗೆ ತುಲಾಭಾರಮಾಡಿಸಿಕೊಂಡು ಮಹಾರಾಜಾ ಎನ್ನುವ ಹೆಸರನ್ನು ಆಮೇಲೆ ತೆಗೆದುಕೊಳ್ಳಬಹುದು. ಸದ್ಯ ನಿನ್ನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಛತ್ರಪತಿ ಎಂತ ಮಾಡಿಬಿಡಬೇಕು. ಒಳ್ಳೆಯ ದಿನ ನೋಡಿ ಕೂಡ ಇಟ್ಟಿದೆ. ಇದಕ್ಕೆಲ್ಲ ತಕ್ಕ ಏರ್ಪಾಡುಮಾಡು.

ಶಿವಾಜ— ಏಕೆ ಇಷ್ಟು ಅವಸರ? ತಿರುಗಿ ನಾವು ರಾಜ ಎನ್ನಿಸಿಕೊಳ್ಳು ವುದಕ್ಕೆ ಬೇರೆಯವರ ಹತ್ತಿರ ಹೋಗದೇ ಇದ್ದರೆ ಸರಿ. ಆ ಹೆಸರು ತೆಗೆದುಕೊಂಡು ಆಗಬೇಕಾದದ್ದೇನು?

ರಾಮ— ಆ ವಿಷಯ ಆಮೇಲೆ ವಿಚಾರಮಾಡೋಣ. ನಾವು ಮಾಡಿರುವ ಏರ್ಪಾಡಿಗೆ ನೀನು ಒಪ್ಪು. ಅವಸರಕ್ಕೆ ಒಂದು ದೊಡ್ಡ ಕಾರಣ ಹೇಳುತ್ತೇನೆ.

ಜೀಜಾ— ಒಪ್ಪು ಶಿವಾ.

ಶಿವಾಜ— ಒಪ್ಪಿದೆ ಮಾಯಿಾ. ದೊಡ್ಡ ಕಾರಣ ಯಾವುದು ಗುರುಗಳೇ?

ರಾಮ— ಗುಣದಲ್ಲಿ ಹೆಸರಿನಲ್ಲಿ ಎರಡರಲ್ಲೂ ರಾಜನಾದವನಿಂದ ಒಂದು ಸಲ ಭಿಕ್ಷೆ ತೆಗೆದುಕೊಳ್ಳಬೇಕು ಎಂತ ನನಗೆ ಆಸೆ. ನೀನು ಗಾದಿಯಮೇಲೆ ಕುಳಿತರೆ ನನ್ನ ಈ ಆಸೆ ನೆರವೇರುತ್ತೆ. ತಾಯಿಾ ಒಂದು ಕೀರ್ತನೆ ಹಾಡಲೆ? (ಎಂದು ಒಂದು ಅಭಂಗವನ್ನು ಹಾಡುವುದಕ್ಕೆ ಮೊದಲು ಮಾಡುವನು.)

---

## ಸ್ಥಾನ ೮

ಸಭಾಮಂಟಪ. ಮಧ್ಯೆ ಸಿಂಹಪೀಠ. ಮಂತ್ರಿಗಳು ಮುಂತಾದವರು ನಿಂತಿದಾರೆ. ಹೊರಗಡೆ ಜಯ ಶಿವಾಜಿ ಮಹಾರಾಜ್, ಜಯ ಛತ್ರಪತಿ ಶಿವಾಜಿ ಎಂದು ಮುಂತಾಗಿ ಜನ ಕೂಗುತ್ತಿದಾರೆ. ತಾನಾಜಿ ಪಿಂಗಳೆ ಮಾತಾಡುತ್ತಿದಾರೆ. ಆಬಾಜಿ ಸೋಂದೇವನು ಬಂದು

ಆಬಾಜಿ— ಹೋಮ ಹವನ ಎಲ್ಲಾ ಮುಗಿಯಿತು. ಮಹಾರಾಜರು ದಾನ ಕೊಡುವುದಕ್ಕೆ ಹೊರಗೆ ಬಂದಿದಾರೆ. ನಮ್ಮ ಪುಣ್ಯ ಇಂದು ಫಲಿಸಿತು.

ತಾನಾಜಿ— ಫಲಿಸಿತು.

ಪಿಂಗಳೆ— ನಮ್ಮ ನಾಡಪುಣ್ಯ. ನಮ್ಮ ಧರ್ಮದ ಪುಣ್ಯ. ನಮ್ಮ ಪುಣ್ಯ- ಆಮೇಲೆ ತಾನಾಜಿ?

ತಾನಾಜಿ— ಆರು ಕುದುರೆ ಇತ್ತು. ನಾಲ್ಕನ್ನು ಬಿಚ್ಚಿ ಮೆಲ್ಲಗೆ ಹೊರಕ್ಕೆ ಬಿಟ್ಟೆ. ಇನ್ನೆರಡನ್ನು ಬಿಚ್ಚಿ ಹಿಡಿದುಕೊಂಡು ಹೊರಟೆ. ಕಚೇರಿ ಯಿಂದ ಯಾರೋ ಒಬ್ಬರು ಯಾರದು ಎಂದರು.

ಪಿಂಗಳೆ— ಆಮೇಲೆ?

ತಾನಾಜಿ— ಯಾಕಪ್ಪ? ಎಂದು ಹೇಳುತ್ತಾ ಆ ಕುದುರೆಗಳನ್ನು ಮುಂದಟ್ಟಿ ಕೊಂಡು ಬೇಗನೆ ಹೊರಟೆ. ಅವರು ಎಲ್ಲಿಗೆ ತಕೊಂಡು ಹೋಗುತೀ ಕುದುರೇನ? ಎಂದರು. ಕೊತ್ವಾಲರು ತಾ ಎಂದರು ಎಂದೆ.

ಪಿಂಗಳೆ— ಚೆನ್ನಾಯಿತು. ಆಮೇಲೆ?

ತಾನಾಜಿ— ಆತ ನಾನೇ ಕೊತ್ವಾಲರು ಎಂದರು.

ಪಿಂಗಳೆ— ಚೆನ್ನಾಯಿತು (ಎಂದು ನಗುತ್ತಾ) ಆಮೇಲೆ?

ತಾನಾಜಿ— ನಾನು "ದೊಡ್ಡ ಕೊತ್ವಾಲರು ತಾ" ಎಂದರು ಎಂದೆ. ಯಾರು ದೊಡ್ಡ ಕೊತ್ವಾಲರು ಎಂದು ಆತ ಬಂದರು. ನಾನು ಅಲ್ಲಿ ನಿಂತಿದಾರೆ ಬನ್ನಿ ಎಂದು ಕುದುರೆ ಬೇಗನೆ ನಡೆಸಿಕೊಂಡು ಹೊರಟೆ. ಅವರು ಹಿಂದೆಯೇ ಬಂದರು. ನಾನು ಅವರ ಕಡೆ ನುಗ್ಗಿ ಹೊಟ್ಟೆಯ ಮೇಲೆ ಒಂದು ಏಟು ಕೊಟ್ಟೆ. ಸ್ವಲ್ಪ ದೊಡ್ಡ

ಹೊಟ್ಟೆ. ಅವರು ಅಯ್ಯೋ ಎಂತ ಬಿದ್ದರು. ಕುದುರೆ ಹಿಡಿದು ಕೊಂಡು ಬಂದು ರಾಜರನ್ನು ಮುಂದೆ ಬಿಟ್ಟು ಹಿಂದೆಯೇ ಬಂದದ್ದೇ ಕೆಲಸ.

**ಪಿಂಗಳೆ**— ಸೇವಾಗುವ ಹೊತ್ತಿಗೆ ಆಯಿತು. ನಾನಾಗಿದ್ದರೆ ಇದನ್ನು ಮಾಡುವುದಕ್ಕಾಗುತ್ತಿರಲಿಲ್ಲ.

**ತಾನಾಜಿ**— ಯಾಕಾಗುತ್ತಿರಲಿಲ್ಲ? ನಿಮ್ಮ ಕೈ ಪಟು ಕಡಿಮೇನೇ?

**ಆಬಾಜಿ**— ಮಹಾರಾಜರು ದಯಮಾಡಿದರು. (ಶಿವಾಜಿ ಬರುತ್ತಾನೆ. ಎಲ್ಲರೂ ಕೈ ಮುಗಿಯುತ್ತಾರೆ. ಆಬಾಜಿ ಬಂದು ಕೈ ಹಿಡಿದು ಅವನನ್ನು ಕರೆದುಕೊಂಡು ಹೋಗಿ ಸಿಂಹಪೀಠದ ಮೇಲೆ ಕೂರಿಸುತ್ತಾನೆ. ಜಯ ಜಯ ಛತ್ರಪತಿ ಶಿವಾಜಿ, ಜಯ ಜಯ ಶಿವಾಜಿ ಮಹಾರಾಜ್ ಎಂದು ಜಯಘೋಷ. ಆಮೇಲೆ ಪಿಂಗಳೆ ಬಂದು ಶಿವಾಜಿಗೆ ಬಾಗಿ ಕೈ ಮುಗಿದು ಶಿವಾಜಿ ಕೈಗೆ ಕೊಡುವ ಪ್ರಕಟನ ಪತ್ರವನ್ನು ಓದುತ್ತಾನೆ.)

**ಪಿಂಗಳೆ**— ಸ್ವಸ್ತಿ. ಶ್ರೀಮತ್ಸಮಸ್ತ ಭೂಮಂಡಲ ಮಂಡನಾಯಮಾನವಾದ ಶ್ರೀಮನ್ಮಹಾರಾಷ್ಟ್ರ ದೇಶದಲ್ಲಿ ರಾಷ್ಟ್ರಾಭಿಮಾನಿದೇವಿ ಜಗದ್ಧಾತ್ರಿ ಶ್ರೀ ರಾಜರಾಜೇಶ್ವರಿ ಶ್ರೀಮದಂಬಾ ಭವಾನೀ ಕೃಪಾ ಪರಿಪೋಷಿತ ಶ್ರೀ ಮನ್ಮಹಾರಾಜ ಶ್ರೀ ಶಿವಾಜಿ ಭೋನ್‌ಸಲೆ ಮಹಾರಾಜರವರು ಶ್ರೀ ಶಾಲೀವಾಹನ ಶಕ ೧೫೮೮ ಅಬ್ದ ಪರಾಭವ ಸಂವತ್ಸರದ ಮಾಘ ಶುದ್ಧ ಸಪ್ತಮಿ ಇಂದು ವಾಸರ ಯುಕ್ತವಾದ ರಥಸಪ್ತಮಿ ಶುಭ ದಿನದಲ್ಲಿ ನಮ್ಮ ರಾಜ್ಯಲಕ್ಷ್ಮಿಯ ಭದ್ರಗೇಹವಾದ ರಾಯಘಡದಲ್ಲಿ ದೇವಬ್ರಾಹ್ಮಣಾನುಗ್ರಹದಿಂದ ಸುಖಸಿಂಹಾಸನಾಸೀನರಾಗಿ ನಮ್ಮ ಸಮಸ್ತ ಪ್ರಜೆ ಜಹಗೀರದಾರ ಸಾಮಂತ ರಾಜರಿಗೂ ಸಮೀಪಸ್ಥ ದೂರಸ್ಥಿತ ಸಮಸ್ತ ಜನಪತಿ ಸಮುದಾಯಕ್ಕೂ ಈ ಮೂಲಕ ಪ್ರಕಟಪಡಿಸುವುದೇನೆಂದರೆ:—

ಈ ಶುಭ ದಿನದಲ್ಲಿ ನಾವು ಶ್ರೀ ಅಂಬಾಭವಾನೀ ಪದ ಪಯೋಜದ್ವಯನ್ಯಸ್ತ ಚೇತಸರಾಗಿ ನಮ್ಮ ಸಮಸ್ತ ಪ್ರಜೆಗಳ ಅಭಿಮತದಂತೆ ಗೋಬ್ರಾಹ್ಮಣ ರಕ್ಷಣಾರ್ಥವಾಗಿಯೂ ಸಮಸ್ತ

ಪ್ರಜಾನುರಂಜನ ಪ್ರಜಾ ಪೋಷಣಾರ್ಥವಾಗಿಯೂ ಸಿಂಹಾಸ
ನಾರೋಹಣ ಶ್ವೇತಚ್ಛತ್ರಾದಿ ಲಾಂಛನ ಧಾರಣದಿಂದ ಅಖಿಲ
ಮಹಾರಾಷ್ಟ್ರ ದೇಶದ ರಾಜತ್ವದ ಭಾರವನ್ನು ವಹಿಸಿರುತ್ತೇವೆ
ಮತ್ತು ಈ ಕಾರಣದಿಂದ ನಮ್ಮ ಪಿತ್ರಾರ್ಜಿತವಾದ ಚಾಕಣ
ಇಂದಾಪುರ ಸೂಪ ಷರವಾಳ ವಯಿ ಯಾದವಗಿರಿ ಮುಖ್ಯವಾದ
ಗ್ರಾಮಗಳನ್ನೊಳಗೊಂಡ ಪುಣ್ಯಾಪ್ರಾಂತದಲ್ಲೂ ನಮ್ಮ ಆಜ್ಞೆ
ಯನ್ನನುಸರಿಸಿ ನಮ್ಮ ದಳಪತಿಗಳು ಶ್ರೀಮದಂಬಾಭವಾನಿಯ
ಅನುಗ್ರಹದಿಂದ ಜಯಿಸಿ ನಮ್ಮ ಸ್ವಾಧೀನಕ್ಕೆ ತಂದಿರುವಂಥ
ಮತ್ತು ನಾವು ಅಂಬಾಭವಾನಿಯ ನಿರವಧಿಕ ವಾತ್ಸಲ್ಯ ಬಲ
ದಿಂದ ಸ್ಥಾಪಿಸಿದಂಥ ದುರ್ಗಗಳು ಮತ್ತು ಅವುಗಳ ಆಡಳಿತಕ್ಕೆ
ಒಳಪಟ್ಟ ನಾಡುಗಳಲ್ಲೂ ಎಂದರೆ ಪ್ರಚಂಡಘಡವೆಂದು ಪ್ರಸಿದ್ಧ
ವಾದ ತೋರಣ ವಜ್ರಘಡವೆಂದು ಪ್ರಸಿದ್ಧವಾದ ರುದ್ರಮಾಲ
ಪುರಂದರಘಡ ಕುಂದಣ ರೋಹಿರ ಲೋಹಘಡ ಈಶಘಡ ತಾಂಕಿ
ತ್ರಿಕೋಣ ಪ್ರಮುಖವಾದ ದಕ್ಷಿಣ ಮಹಾರಾಷ್ಟ್ರ ಪ್ರಾಂತ
ಮತ್ತು ವಿಶಾಲಘಡವೆಂದು ಪ್ರಸಿದ್ಧವಾದ ಖೇಲನ ರತ್ನಗಿರಿ
ರಾಜಾಪುರ ಮಾಹುಳೀ ಮುರಂಜನ ಅಂಕೋಲ ಕ್ಷೀರದುರ್ಗ
ತುಳಸೀಕೂಲ ಭಂಡಾರದುರ್ಗ ಮಾರ್ಗಘಡ ಅಕ್ಷಯಘಡ ನಾರ
ದುರ್ಗ ಶೃಂಗಾರಪುರ ಪಹ್ನಾಳ ಕಲ್ಯಾಣ ಪ್ರತಾಪಗಡ ವಸಂತ
ನಾಂಗ ಕರ್ಣಾಳ ಸ್ವರ್ಣಘಡ ಖಂಡಕಲಾ ಮಾನಘಡ ಮುಖ್ಯ
ವಾದ ಕೊಂಕಣ ಪ್ರದೇಶ ಎಂಬ ಪ್ರಾಂತಗಳಲ್ಲೂ ಅವ್ಯಾಹತವಾಗಿ
ನಡೆಯುತಕ್ಕ ನಮ್ಮ ಅಧಿಕಾರವನ್ನು ಈ ಮೂಲಕ ವಿಶದೀಕರಿ
ಸಿರುತ್ತೇವೆ ಮತ್ತು ಈ ಮಧ್ಯೆ ಈ ಪ್ರದೇಶಗಳಲ್ಲಿ ಯಾವ ವಿಷಯ
ದಲ್ಲಾಗಲಿ ನಮ್ಮ ಸಮ್ಮತಿಯಿಂದ ನಮ್ಮ ಪರವಾಗಿ ನಮ್ಮ
ಸೇವಕರಿಗಲ್ಲದೆ ಇತರರಿಗೆ ಕೊಟ್ಟಿದ್ದ ಅಧಿಕಾರವನ್ನು ಈ ಮೂಲಕ
ಪ್ರತಿಸಂಹರಿಸಿದ್ದೇವೆ, ಮೇಲಾಗಿ ಇದು ಮೊದಲು ಈ ಎಲ್ಲ
ಪ್ರಾಂತ್ಯಗಳ ಪ್ರಜೆಗಳೂ ಸರ್ವವಿಧವಾದ ತೆರಿಗೆ ವರಿ ಸುಂಕ
ಸಾರಿಗೆಗಳನ್ನು ನಮ್ಮ ರಾಜ್ಯದ ಪರವಾಗಿ ನಮ್ಮಿಂದ ಸರಿಯಾದ

ಅಧಿಕಾರವನ್ನು ಪಡೆದಿರುವ ರಾಜಸೇವಕರಿಗೆ ಮಾತ್ರ ಸಲ್ಲಿಸ ತಕ್ಕದ್ದು ಮತ್ತು ನಮ್ಮ ರಾಜ್ಯದ ವಿಷಯದಲ್ಲಿ ವಿಶ್ವಾಸದಿಂದಲೂ ಭಕ್ತಿಯಿಂದಲೂ ನಡೆದುಕೊಳ್ಳತಕ್ಕದ್ದು ಮತ್ತು ನಮ್ಮ ಮೂಲಕ ಅಲ್ಲದೆ ಬೇರೆ ಯಾರ ಅಧಿಕಾರಕ್ಕಾಗಲಿ ಒಳಪಟ್ಟು ನಡೆದುಕೊಳ್ಳ ತಕ್ಕದ್ದಲ್ಲ ಮೇಲಾಗಿ ಇದಕ್ಕೆ ವಿರೋಧವಾಗಿ ನಡೆದುಕೊಂಡವರು ಯಾರೇ ಆಗಲಿ ನಮ್ಮ ದಂಡನೆಗೆ ಗುರಿಯಾಗುತ್ತಾರೆ ಎಂಬದಾಗಿ ಸಿಂಹಾಸನಾರೋಹಣ ಶ್ವೇತಚ್ಛತ್ರ ಲಾಂಛನ ಧಾರಣದಿಂದ ಈ ದಿವಸ ನಮ್ಮ ರಾಷ್ಟ್ರದ ರಾಜತ್ವವನ್ನು ವಹಿಸಿ ಸಮಸ್ತ ರಾಷ್ಟ್ರ ಗಳಿಗೂ ಪ್ರಕಟನೆ ಮಾಡಿದೇವೆ ಮತ್ತು ಈ ವಿಚಾರವನ್ನು ನಮ್ಮ ರಾಷ್ಟ್ರದ ಎಲ್ಲಾ ಕಡೆಗಳಲ್ಲೂ ಡಂಗೋರೆಯ ಮೂಲಕ ಸಾರತಕ್ಕ ದ್ದೆಂದೂ ಸ್ನೇಹಸೂಚಕ ಪತ್ರ ಮುಖೇನ ದೇಹಲೀ ಬಿಜಯಾ ಪುರ ಪ್ರಮುಖವಾದ ಸಕಲ ರಾಷ್ಟ್ರಗಳ ಬಾದಷಹ ಸುಲ್ತಾನ ನವಾಬ ಪರರಾಜರಿಗೂ ತಿಳಿಸತಕ್ಕದ್ದೆಂದೂ ನಮ್ಮ ಅಷ್ಟಪ್ರಧಾನ ಮಂಡಿತ ಅಮಾತ್ಯ ಮಂಡಲಕ್ಕೆ ಇದೇ ವೇಳೆಯಲ್ಲಿ ಅನುಜ್ಞೆ ಮಾಡಿದೇವೆಯಾಗಿ ಸ್ವಸ್ತಿ ಶ್ರೀ

ಓದಿ ಮುಗಿಸಿ ಪತ್ರವನ್ನು ಮರಳಿ ಶಿವಾಜಿಗೆ ಒಪ್ಪಿಸುತ್ತಾನೆ. ಇದಾದನೇಲೆ ಮತ್ತೆ ಜಯಘೋಷ. ಆಮೇಲೆ ಸಭಿಕರು ಎದುರಿಗೆ ಬಂದು ನಜರು ಮುಜರೆ ಮಾಡುತ್ತಾರೆ. ಇದೆಲ್ಲ ಮುಗಿದಮೇಲೆ ಶಿವಾಜಿ ಎದ್ದು ಆಬಾಜಿಯ ಕೈ ಹಿಡಿದುಕೊಂಡು ಕೆಳಗೆ ಬರುತ್ತಾನೆ. ಅಲ್ಲಿ ರಾಮದಾಸ ಒಂದು ಕೊನೆಯಲ್ಲಿ ನಿಂತಿದ್ದು

ರಾಮ— ಮಹಾರಾಜ, ನನಗೆ ಭಿಕ್ಷೆ ಕೊಡಬೇಕು.

ಶಿವಾಜಿ— ಇದೇನು ಪರಿಹಾಸ್ಯ ಗುರುಗಳೇ.

ರಾಮ— ಇಲ್ಲ. ನಿನಗೆ ಮೊದಲೇ ಹೇಳಿದ್ದೆನಲ್ಲ. ನೀನು ದಾನಗಳನ್ನು ಕೊಟ್ಟಾಗ ನಾನು ಅಲ್ಲಿ ಬರಲಿಲ್ಲ. ಆದ್ದರಿಂದ ಈಗ ಬೇಡಲು ಬಂದಿದೇನೆ.

ಶಿವಾಜಿ— ಅಗತ್ಯ ಆಗಬಹುದು. (ಎಂದು ಪಿಂಗಳೆಯನ್ನು ಕರೆದು ಒಂದು ಕಡೆಗೆ ಹೋಗಿ) ನನ್ನ ರಾಜ್ಯ ಎಂದು ಬರೆಯಿರಿ (ಎಂದು ಬರೆಯಿಸಿ) ಅದಕ್ಕೆ

ನಮ್ಮ ಮುದ್ರೆ ಹಾಕಿ (ಎಂದು ಹಾಕಿಸಿ ತಂದು ಆ ಕಾಗದವನ್ನು ರಾಮ ದಾಸನ ಭಿಕ್ಷಾಪಾತ್ರೆಯಲ್ಲಿ ಹಾಕುವನು.)

ರಾಮು— ಏನು ಇದು (ಎಂದು ಕಾಗದವನ್ನು ತೆಗೆದು ನೋಡಿ) "ನನ್ನ ರಾಜ್ಯ." ಮಹಾರಾಜ, ನನಗೆ ನಿನ್ನ ರಾಜ್ಯ ಏತಕ್ಕೆ ಬೇಕು? ನನಗೆ ಒಂದು ಹಿಡಿ ಅಕ್ಕಿ ಹಾಕಿಸಿದ್ದರೆ ಸಾಕಾಗಿತ್ತು.

ಶಿವಾಜಿ— ನನಗೆ ಸಾಕಾಗುತ್ತಿರಲಿಲ್ಲ.

ರಾಮು— ಅಣ್ಣಾ, ನಾನು ರಾಜ್ಯವನ್ನು ಏನುಮಾಡಲಿ. ಒಂದು ಹೊತ್ತಿನ ಅಕ್ಕಿಗೆ ಹೆಚ್ಚಾಗಿ ಭಿಕ್ಷಾ ಬಂದರೆ ನಾನು ಅದನ್ನು ಯಾರಿಗಾ ದರೂ ಕೊಡುತ್ತೇನೆ.

ಶಿವಾಜಿ— ಇದನ್ನೂ ಯಾರಿಗಾದರೂ ಕೊಡಿ.

ರಾಮು— ಆಗಲಿ, ಶಿವಾಜಿ. ಈ ರಾಜ್ಯದಲ್ಲಿ ನನ್ನ ಒಂದು ಹೊತ್ತಿನ ಅಕ್ಕಿ ಯಷ್ಟು ನನಗೆ ಬಿಟ್ಟು ಉಳಿದದ್ದನ್ನ ನೀನು ತೆಗೆದುಕೊ (ಎಂದು ಆ ಕಾಗದವನ್ನು ಪುನಃ ಅವನ ಕೈಯಲ್ಲಿ ಹಾಕುವನು).

ಶಿವಾಜಿ— (ಸ್ವಲ್ಪ ನಗುತ್ತ) ಇದಕ್ಕೆ ನಿಮ್ಮ ಮುದ್ರೆಯನ್ನು ಹಾಕಿ.

ರಾಮು— ಇಕೋ (ಎಂದು ತನ್ನ ಕಾವಿಯ ಬಟ್ಟೆಯಿಂದ ಒಂದು ಸಣ್ಣ ಚಿಂದಿ ಹರಿದು ಆ ಕಾಗದವನ್ನು ಅದರಲ್ಲಿ ಕಟ್ಟಿ ಕೊಡುತ್ತಾನೆ.) ಇನ್ನು ರಾಜ್ಯ ವನ್ನು ಆಳು. ಧರ್ಮವನ್ನು ಸಲಹು.

ಶಿವಾಜಿ— ಅಪ್ಪಣೆ (ಎನ್ನುವನು).

ರಾಮು— ಜಯ ಜಯ ಛತ್ರಪತಿ, ಜಯ ಶಿವಾಜಿ ಮಹಾರಾಜ್.

ಜನರೆಲ್ಲ ಜಯ ಜಯ ಛತ್ರಪತಿ, ಜಯ ಶಿವಾಜಿ ಮಹಾರಾಜ್ ಎಂದು ಕೂಗುತ್ತಾರೆ. ಆಬಾಜಿ ಸಿಂಗಳೆ ಶಿವಾಜಿಯನ್ನು ಕರೆದುಕೊಂಡು ಹೊರಡು ತ್ತಾರೆ. ಮತ್ತೆ ಜಯಘೋಷ.

ಎಲ್ಲರೂ— ಜಯ ಆರ್ಯಧರ್ಮ, ಜಯ ಸನಾತನ ಧರ್ಮ, ಜಯ ನಿತ್ಯ ಧರ್ಮ, ಜಯ ವಿಶ್ವಧರ್ಮ, ಜಯ ಜಯ ಜಯ.

———:*:———

